

ಕರ್ನಾಟಕ ಸರ್ಕಾರ

# ತಿಳಿ ಕನ್ನಡ

## ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕ






## ಏಳನೆಯ ತರಗತಿ

### ಮೊದಲನೆಯ ಮತ್ತು ಎರಡನೆಯ ಸೆಮಿಸ್ಟರ್

೨೦೧೫

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)
೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೆಯ ಹಂತ
ಬೆಂಗಳೂರು–೫೬೦೦೮೫

# ಪಠ್ಯಪುಸ್ತಕ ರಚನಾ ಸಮಿತಿ

***ಅಧ್ಯಕ್ಷರು :***

**ಶ್ರೀ ಶಿವಲಿಂಗಯ್ಯ,** ನಿವೃತ್ತ ಜಂಟಿ ನಿರ್ದೇಶಕರು, ನಂ ೩೩, ೧೦ನೇ ಮುಖ್ಯರಸ್ತೆ, ಹಂಪಿ ನಗರ, ಬೆಂಗಳೂರು.

***ಸದಸ್ಯರು :***

**ಶ್ರೀ ಕೆ.ಬಿ.ಕೆಂಡಗಣ್ಣಸ್ವಾಮಿ,** ಸಹಶಿಕ್ಷಕ, ಸರ್ಕಾರಿ ಪದವಿಪೂರ್ವ ಕಾಲೇಜು (ಪ್ರೌಢಶಾಲೆ ವಿಭಾಗ), ಮೆಣಸೀಕ್ಯಾತನಹಳ್ಳಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ

**ಶ್ರೀಮತಿ ಬಿ.ಕೆ.ಧನಲಕ್ಷ್ಮಿ,** ಕ್ಷೇತ್ರ ಸಂಪನ್ಮೂಲ ವ್ಯಕ್ತಿ, ಕ್ಷೇತ್ರ ಸಂಪನ್ಮೂಲ ಕೇಂದ್ರ, ಬ್ರಹ್ಮಾವರ, ಉಡುಪಿ ಜಿಲ್ಲೆ.

**ಶ್ರೀಮತಿ ಮೀನಾಕ್ಷಿ ಎಸ್. ಹಿರೇಮಠ,** ಸಹ ಶಿಕ್ಷಕಿ, ಕರ್ನಾಟಕ ಯೂನಿವರ್ಸಿಟಿ ಪಬ್ಲಿಕ್ ಸ್ಕೂಲ್,ಕೆ.ಸಿ.ಡಿ.ರಸ್ತೆ, ಧಾರವಾಡ.

**ಶ್ರೀಮತಿ ಕೆ.ಎಸ್.ರಮಾಮಣಿ,** ನಿವೃತ್ತ ಶಿಕ್ಷಕಿ, ಶ್ರೀರಾಮದೇವಾಲಯ ರಸ್ತೆ, ಕೋಟೆ, ಹೊಳೆನರಸೀಪುರ, ಹಾಸನಜಿಲ್ಲೆ.

**ಶ್ರೀ ಪರಮೇಶ್ವರ ಎಂ. ನಿಂಬರ್ಗಾ,** ಸಹ ಶಿಕ್ಷಕ, ಸರ್ಕಾರಿ ಪ್ರೌಢ ಶಾಲೆ, ಹುಣಸಿ ಹಡಗಿಲ, ಕಲಬುರಗಿ ತಾ. (ದಕ್ಷಿಣ)

**ಶ್ರೀ ಪಿ.ಎ.ಬಿ,ಈಶ್ವರ್,** ಚಿತ್ರ ಕಲಾ ಶಿಕ್ಷಕರು, ಹಮ್ದರ್ದ್ ಪ್ರೌಢಶಾಲೆ, ರಾಯಚೂರು.

***ಪರಿಶೀಲಕರು :***

**ಶ್ರೀ ಪ್ರಕಾಶ್ ಬೂಸನೂರು,** ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿಗಳು, ನಂ.೫೫, "ಸೂರಜ್" ನಿಜಲಿಂಗಪ್ಪ ಲೇಔಟ್, ದಾವಣಗೆರೆ.

***ಸಂಪಾದಕ ಮಂಡಳಿ ಸದಸ್ಯರು:***

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ. ನಗರ , ಬೆಂಗಳೂರು–೭೮

**ಡಾ. ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ ೧೩೭, ೧೨ನೇ ಕ್ರಾಸ್, ಜೆ.ಪಿ. ನಗರ, ಬೆಂಗಳೂರು–೭೮

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ಜ್ಞಾನಶಕ್ತಿ ಆವರಣ, ತೊರವಿ, ವಿಜಯಾಪುರ – ೫೮೬೧೦೮.

***ಮುಖ್ಯ ಸಂಯೋಜಕರು:***

**ಪ್ರೊ. ಜಿ.ಎಸ್.ಮುಡಂಬಡಿತ್ತಾಯ,** ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯ ಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೫೬೦ ೦೮೫

***ಸಲಹೆ ಮತ್ತು ಮಾರ್ಗದರ್ಶನ:***

**ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫.

**ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೫೬೦ ೦೮೫

***ಕಾರ್ಯಕ್ರಮ ಸಂಯೋಜಕರು:***

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫.

# ಮುನ್ನುಡಿ

೨೦೦೫ನೆಯ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೆಯ ಸಾಲಿನಿಂದ ಒಂದನೆಯ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೪ ನೆಯ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು ೫ ರಿಂದ ೧೦ ನೆಯ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಆವಶ್ಯಕತೆಗಳೊಂದಿಗೆ ಜೋಡಿಸುವುದು
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಆವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.



ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಆವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ವೃದ್ಧಿಮಾಡುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಗಿದೆ.



**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

# ನುಡಿನಮನ

೨೦೧೨–೧೩ ನೆಯ ಶೈಕ್ಷಣಿಕ ವರ್ಷದಿಂದ ಕರ್ನಾಟಕ ರಾಜ್ಯದ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳಿಗೆ ಹೊಸ ಪಠ್ಯ ಪುಸ್ತಕಗಳನ್ನು ಪರಿಚಯಿಸಲಾಗುತ್ತಿದೆ. ಇದರ ಅಂಗವಾಗಿ ಸಿದ್ಧಗೊಂಡಿರುವ ಏಳನೇ ತರಗತಿ ಕನ್ನಡ ದ್ವಿತೀಯ ಭಾಷಾ ಪಠ್ಯ ಪುಸ್ತಕ ಇದಾಗಿರುತ್ತದೆ. ಕರ್ನಾಟಕ ಸರ್ಕಾರ ಶಿಕ್ಷಣ ಕ್ಷೇತ್ರದಲ್ಲಿ ಮೂರು ಭಾಷಾ ಸೂತ್ರವನ್ನು (ತ್ರಿಭಾಷಾ ಸೂತ್ರ) ಜಾರಿಗೊಳಿಸಿರುವುದಲ್ಲದೆ ಕನ್ನಡೇತರ ಮಾತೃ ಭಾಷಿಕರು ಕನ್ನಡವನ್ನು ದ್ವಿತೀಯ ಇಲ್ಲವೇ ತೃತೀಯ ಭಾಷೆಯಾಗಿ ಕಲಿಯುವ ಅವಕಾಶವನ್ನು ಕಲ್ಪಿಸಲಾಗಿದೆ.

ಇದರ ಮೂಲಕ ಸಮಸ್ತ ಕನ್ನಡಿಗರೊಂದಿಗೆ ಹೊಂದಿಕೊಂಡು ಬಾಳಲು, ಕನ್ನಡವನ್ನು ಎಲ್ಲ ರಂಗಗಳಲ್ಲಿಯೂ ಸೂಕ್ತವಾಗಿ ಬಳಸುವ ಸಾಮರ್ಥ್ಯವನ್ನು ಪಡೆಯಲೆಂಬ ಭಾವನೆಯಿಂದ ಹಿರಿಯ ಪ್ರಾಥಮಿಕ ತರಗತಿಗಳಲ್ಲಿ ಕನ್ನಡವನ್ನು ಕಲಿಸುವ ಅವಕಾಶವನ್ನು ಕಲ್ಪಿಸಲಾಗಿದೆ. ಈ ಪಠ್ಯ ಪುಸ್ತಕವು ೨೦೦೫ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ ಮಾರ್ಗದರ್ಶನಕ್ಕೆ ಅನುಗುಣವಾಗಿ ಸಾಮರ್ಥ್ಯ ಆಧಾರಿತವಾಗಿದೆ. ಜೊತೆಗೆ ಪಠ್ಯ ವಿಷಯವು ಕನ್ನಡ ನಾಡು, ನುಡಿ, ಸಂಸ್ಕೃತಿಯ ಅಂಶಗಳನ್ನು ಒಳಗೊಂಡಿದೆ.

೨೦೦೫ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಲ್ಲಿ, 'ಮಗುವು ಜ್ಞಾನವನ್ನು ತಾನೇ ರಚಿಸಿಕೊಳ್ಳುತ್ತದೆ ಎಂಬ ಅಂಶವನ್ನು ಆಧರಿಸಿ ಪಠ್ಯಕ್ರಮ, ಪಠ್ಯವಸ್ತು ಮತ್ತು ಪಠ್ಯಪುಸ್ತಕಗಳ ರಚನೆ ಆಗಬೇಕು ಮತ್ತು ಶಿಕ್ಷಕರು ತರಗತಿಯ ಅನುಭವಗಳನ್ನು ಮಗುವಿನ ಸ್ವಭಾವ ಮತ್ತು ಪರಿಸರ ಇವಕ್ಕೆ ಸರಿ ಹೊಂದಿಸುವಂತೆ ರಚಿಸಬೇಕು ಮತ್ತು ಎಲ್ಲ ಮಕ್ಕಳಿಗೂ ಕಲಿಯಲು ಸಮಾನ ಅವಕಾಶವನ್ನು ಒದಗಿಸಬೇಕು ಎಂಬುದನ್ನು ಸೂಚಿಸುತ್ತದೆ. ಕಲಿಯಬೇಕೆಂಬ ಮಗುವಿನ ಸಹಜ ಆಸೆ ಮತ್ತು ಅದರ ಕಲಿಕೆಯ ತಂತ್ರಗಳನ್ನು ವೃದ್ಧಿಸುವುದೂ ಸಹ ಇದರ ಗುರಿಯಾಗಿರಬೇಕು ಎಂಬ ಅಂಶವನ್ನು ಪ್ರಸ್ತಾಪಿಸಿದೆ. ಸದರಿ ಉದ್ದೇಶ ಮತ್ತು ಗುರಿಗಳನ್ನು ಗಮನದಲ್ಲಿಟ್ಟುಕೊಂಡು ಪಠ್ಯ ಪುಸ್ತಕವನ್ನು ರಚಿಸಲಾಗಿದೆ.

ಪಠ್ಯ ಪುಸ್ತಕ ರಚನೆಯಲ್ಲಿ ಅಖಂಡ ಕರ್ನಾಟಕದ ಕಲ್ಪನೆಯನ್ನು ಗಮನದಲ್ಲಿಟ್ಟುಕೊಂಡು ಬಹುಪಾಲು ಕರ್ನಾಟಕದ ಎಲ್ಲ ಪ್ರಾಂತ್ಯಗಳಿಗೂ ಆದ್ಯತೆ ನೀಡಲು ಪ್ರಯತ್ನಿಸಲಾಗಿದೆ. ಸಾಹಿತ್ಯಾತ್ಮಕವಾಗಿ ಗಮನಿಸಿದಾಗ ಗದ್ಯ ಮತ್ತು ಪದ್ಯ ಈ ಎರಡೂ ಪ್ರಕಾರಗಳನ್ನು ಕಾಣಬಹುದಾಗಿದೆ. ಪದ್ಯಗಳ ಆಯ್ಕೆಯಲ್ಲಿ ಹೊಸ ಪ್ರತಿಭೆಗಳಿಗೂ ಅವಕಾಶ ಕಲ್ಪಿಸಿದೆ. ಗದ್ಯಭಾಗದಲ್ಲಿ ನಾಟಕ, ಕಾದಂಬರಿ, ಸಣ್ಣಕಥೆ, ಪ್ರವಾಸ ಲೇಖನ, ಪತ್ರಿಕೆ ಮುಂತಾದ ಪ್ರಕಾರಗಳನ್ನು ಕಾಣಬಹುದಾಗಿದೆ. ಅಭ್ಯಾಸ ಹಂತದಲ್ಲಿ ಪಠ್ಯ ವಿಷಯ, ಸಾಮರ್ಥ್ಯ, ಭಾಷಾಭ್ಯಾಸ ಮತ್ತು ಭಾಷಾ ಚಟುವಟಿಕೆಗಳನ್ನು ಪ್ರತ್ಯೇಕವಾಗಿ ಗುರ್ತಿಸಿದ್ದು ಪ್ರತಿಯೊಂದಕ್ಕೂ ವಿಶೇಷ ಒತ್ತನ್ನು ನೀಡಲಾಗಿದೆ. ಶಿಕ್ಷಕರು ಪಠ್ಯ ವಿಷಯದಲ್ಲಿನ ಈ ಎಲ್ಲ ಅಂಶಗಳನ್ನು ಮನನ ಮಾಡಿಕೊಳ್ಳುವ ಜೊತೆಗೆ ಮಕ್ಕಳು ಕಲಿಕೆಯನ್ನು ಕಟ್ಟಿಕೊಳ್ಳಲು ಮಾರ್ಗದರ್ಶಕರಾಗಿ ಕಾರ್ಯನಿರ್ವಹಿಸುವರೆಂಬ ಆಶಯವಿದೆ.

ಈ ಪಠ್ಯಪುಸ್ತಕದ ರಚನೆ ಹಾಗೂ ಪರಿಷ್ಕರಣೆಕಾರ್ಯದಲ್ಲಿ ನೆರವಾದ ಎಲ್ಲ ಸದಸ್ಯರ, ಪರಿಶೀಲಕರ, ಕಲಾವಿದರ ಸಹಕಾರವನ್ನು ನೆನಪಿಸಿಕೊಳ್ಳುತ್ತೇನೆ. ಅಂತೆಯೇ ರಾಜ್ಯ ಪಠ್ಯಪುಸ್ತಕ ಸಂಘದ ನಿರ್ದೇಶಕ, ಸಹ ನಿರ್ದೇಶಕ, ಉಪನಿರ್ದೇಶಕ ಹಾಗೂ ಹಿರಿಯ ಸಹಾಯಕ ನಿರ್ದೇಶಕರ ಮಾರ್ಗದರ್ಶನ ಹಾಗೂ ಸಹಕಾರವನ್ನು ಸ್ಮರಿಸುತ್ತ ಸಮಿತಿಯ ಪರವಾಗಿ ಅಭಿನಂದಿಸುತ್ತೇನೆ. ಪಠ್ಯಪುಸ್ತಕ ಸುಂದರವಾಗಿ ಹೊರಬರಲು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರನ್ನು ಕೃತಜ್ಞತಾ ಪೂರ್ವಕವಾಗಿ ಅಭಿನಂದಿಸುತ್ತೇನೆ.

ಶಿವಲಿಂಗಯ್ಯ

**ಅಧ್ಯಕ್ಷರು, ತಿಳಿ ಕನ್ನಡ – ೭**

**ಪಠ್ಯಪುಸ್ತಕ ರಚನಾ ಸಮಿತಿ**

## ಪರಿವಿಡಿ

## ಮೊದಲನೆಯ ಸೆಮಿಸ್ಟರ್


| ಕ್ರ.ಸಂ. | ಗದ್ಯ/ಪದ್ಯಗಳು | ಪ್ರಕಾರಗಳು | ಕವಿ/ಲೇಖಕರು | ಪು.ಸಂ. |
|---|---|---|---|---|
| ಅ. | ಚಿತ್ರವನ್ನು ಗಮನಿಸಿ | — | — | ೦೧ |
| ಆ. | ಇರುವೆ ಮತ್ತು ಮಿಡತೆ | — | — | ೦೨ |
| ಇ. | ನಿತ್ಯೋತ್ಸವ | ಪದ್ಯ | ನಿಸಾರ್ ಅಹಮ್ಮದ್.ಕೆ.ಎಸ್. | ೦೩ |
| ೧. | ದುಡಿಮೆ | ಪದ್ಯ | ಚೆನ್ನವೀರಕಣವಿ | ೦೪ |
| ೨. | ನಾವೂ ನಿಮ್ಮಂತೆ | ಚಿತ್ರಕಥೆ | ಸಮಿತಿ | ೧೨ |
| ೩. | ತರಗತಿಗೊಂದು ಫಲಕ | ಗದ್ಯ | ಸಮಿತಿ | ೧೮ |
| ೪. | ಮಿತ್ರರ ಸಮಾಗಮ | ಗದ್ಯ | ಸಮಿತಿ | ೨೬ |
| ೫. | ಶ್ರಾವಣಾ ಬಂತು ಕಾಡಿಗೆ | ಪದ್ಯ | ದ.ರಾ.ಬೇಂದ್ರೆ | ೩೪ |
| ೬. | ಕಚ | ಗದ್ಯ | ಸಮಿತಿ | ೪೦ |
| ೭. | ಬೇರಿಗೆ ನೀರು | ನಾಟಕ | ಸಮಿತಿ | ೪೮ |
| ೮. | ಗೆಳತಿಗೊಂದು ಪತ್ರ | ಪತ್ರಲೇಖನ | ಸಮಿತಿ | ೫೬ |
| | ಪಠ್ಯಾಧಾರಿತ ಪದಕೋಶ | — | — | ೬೫ |


## ಎರಡನೆಯ ಸೆಮಿಸ್ಟರ್


| | | | | |
|---|---|---|---|---|
| ೧. | ಈನೆಲ ಈಜಲ | ಪದ್ಯ | ಹೆಚ್. ಡುಂಡಿರಾಜ್ | ೬೮ |
| ೨. | ದಾನಚಿಂತಾಮಣಿ ಅತ್ತಿಮಬ್ಬೆ | ಗದ್ಯ | ಸಮಿತಿ | ೭೩ |
| ೩. | ಜಾತ್ರೆಯಲ್ಲಿ ಒಂದು ಸುತ್ತು | ಗದ್ಯ | ಸಮಿತಿ | ೮೧ |
| ೪. | ಜಾಣ ಆಮೆ | ಪದ್ಯ | ಭಾಸ್ಕರ್ ನೆಲ್ಯಾಡಿ | ೯೦ |
| ೫. | ಪೋಷಕರ ದಿನಾಚರಣೆ | ಗದ್ಯ | ಸಮಿತಿ | ೯೫ |
| ೬. | ವಿಶ್ವ ಆರೋಗ್ಯ ದಿನಾಚರಣೆ | ಗದ್ಯ | ಸಮಿತಿ | ೧೦೪ |
| ೭. | ಸರ್ವಜ್ಞನ ವಚನಗಳು | ಪದ್ಯ | ಸರ್ವಜ್ಞ | ೧೧೨ |
| ೮. | ಬಂಡೆದ್ದ ಮುಂಡರಗಿ ಭೀಮರಾಯ | ಐತಿಹಾಸಿಕ ನಾಟಕ | ನಿಂಗುಸೊಲಗಿ | ೧೧೮ |
| | ಪಠ್ಯಾಧಾರಿತ ಪದಕೋಶ | — | — | ೧೨೮ |

# ಮೊದಲನೆಯ ಸೆಮಿಸ್ಟರ್

## (ಅ) ಚಿತ್ರವನ್ನು ಗಮನಿಸಿ



ಅ) ಚಿತ್ರವನ್ನು ನೋಡಿ ೧೦ ಪದಗಳನ್ನು ಬರೆಯಿರಿ.



| | | | | |
|---|---|---|---|---|
| | | | | |
| | | | | |

ಆ) ಚಿತ್ರಕ್ಕೆ ಸಂಬಂಧಿಸಿದಂತೆ ೫ ವಾಕ್ಯಗಳನ್ನು ಬರೆಯಿರಿ.

______________________________

______________________________

______________________________

______________________________

______________________________

ಇ) ಕೆಳಗಿನ ವಾಕ್ಯಗಳನ್ನು ನಕಲು ಮಾಡಿ.

ಆಟವೆಂದರೆ ನನಗೆ ಇಷ್ಟ

ಗಿಡ ಮರಗಳನ್ನು ಬೆಳೆಸೋಣ

## (ಆ) ಇರುವೆ ಮತ್ತು ಮಿಡತೆ

ವಸಂತ ಋತು ಎಲ್ಲೆಡೆ. ಮರಗಿಡಗಳಲ್ಲಿ ಹೊಸ ಚಿಗುರು ಹೊಮ್ಮಿದೆ. ಬಣ್ಣ ಬಣ್ಣದ ಹೂಗಳು ಅರಳಿವೆ. ವನಗಳಲ್ಲಿನ ಸೊಬಗು ಕಣ್ಮನಗಳನ್ನು ಸೆಳೆದಿದೆ. ಮಿಡತೆಯೊಂದು ಅತ್ತಿತ್ತ ಸುತ್ತಾಡುತ್ತ ಕಾಲಕಳೆಯುತ್ತಿದೆ.

ಒಂದು ದಿನ ಇರುವೆಯೊಂದು ಬಾಯಲ್ಲಿ ಕಾಳು ಕಚ್ಚಿಕೊಂಡು ಹೋಗುತ್ತಿತ್ತು. ಅದನ್ನು ಕಂಡ ಮಿಡತೆ ವನವ ಸುತ್ತಿ ಬರಲು ಜೊತೆಗೆ ಕರೆಯಿತು. ನಾನು ಆಹಾರ ಸಂಗ್ರಹಿಸಬೇಕಿದೆ. ಈಗ ನಿನ್ನೊಂದಿಗೆ ಬರಲು ನನಗೆ ಸಮಯವಿಲ್ಲವೆಂದು ಇರುವೆ ಹೇಳಿತು. ಇರುವೆಯ ಮಾತಿಗೆ ನಕ್ಕು ಮಿಡತೆ ಹಾರಿಹೋಯಿತು.

ಮಳೆಗಾಲದ ಒಂದು ದಿನ ಮಿಡತೆಗೆ ಆಹಾರ ಸಿಗದೇ ಹೋಯಿತು. ಹಸಿವನ್ನು ತಾಳಲಾರದೆ ಇರುವೆಯ ಬಳಿ ಕೇಳಿತು, "ಗೆಳೆಯಾ ನನಗೂ ಸ್ವಲ್ಪ ಆಹಾರ ಕೊಡುವೆಯಾ" ಎಂದು. "ವಸಂತ ಋತುವಿನಲ್ಲಿ ನಾನು ಕಷ್ಟಪಟ್ಟು ಆಹಾರ ಸಂಗ್ರಹ ಮಾಡಿದ್ದೇನೆ. ನೀನು ಆಗ ಸುತ್ತಾಡುತ್ತಾ ಕಾಲಹರಣ ಮಾಡಿದೆ. ಏನು ಮಾಡಲಿ ನಿನಗೆ ಆಹಾರ ಕೊಟ್ಟರೆ ನನ್ನ ಪರಿವಾರಕ್ಕೆ ಕೊರತೆಯಾಗುತ್ತದೆಯಲ್ಲಾ" ಎಂದಿತು ಇರುವೆ. ಇರುವೆಯ ಮಾತಿನಿಂದ ಮಿಡತೆಗೆ ತನ್ನ ತಪ್ಪಿನ ಅರಿವಾಯಿತು. "ಗೆಳೆಯಾ ನಿನ್ನಿಂದ ನಾನು ಪಾಠ ಕಲಿತಿರುವೆ" ಎಂದು ವಿನಯದಿಂದ ಹೇಳಿತು. ಮಿಡತೆಯಲ್ಲಾದ ಪರಿವರ್ತನೆಗೆ ಇರುವೆ ಮೆಚ್ಚುಗೆ ವ್ಯಕ್ತಪಡಿಸಿತು. ತನ್ನ ಆಹಾರವನ್ನು ಮಿಡತೆಯೊಂದಿಗೆ ಹಂಚಿ ತಿಂದಿತು.



ಅ) ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

೧. ಮಿಡತೆ ಹೇಗೆ ಕಾಲಹರಣ ಮಾಡುತ್ತಿತ್ತು?

೨. ಆಹಾರ ಸಂಗ್ರಹಿಸುತ್ತಿದ್ದುದು ಯಾವುದು?

೩. ಮಿಡತೆ ಮತ್ತು ಇರುವೆ ಇವುಗಳಲ್ಲಿ ನೀವು ಯಾವುದನ್ನು ಮೆಚ್ಚುವಿರಿ? ಏಕೆ?

# (ಇ) ನಿತ್ಯೋತ್ಸವ

## ಈ ಪದ್ಯವನ್ನು ರಾಗವಾಗಿ ಹಾಡಿ

ಜೋಗದ ಸಿರಿ ಬೆಳಕಿನಲ್ಲಿ
ತುಂಗೆಯ ತೆನೆ ಬಳುಕಿನಲ್ಲಿ
ಸಹ್ಯಾದ್ರಿಯ ಲೋಹದದಿರ
ಉತ್ತುಂಗದ ನಿಲುಕಿನಲ್ಲಿ
ನಿತ್ಯ ಹರಿದ್ವರ್ಣ ವನದ ತೇಗ ಗಂಧ ತರುಗಳಲ್ಲಿ
ನಿತ್ಯೋತ್ಸವ ತಾಯಿ ನಿತ್ಯೋತ್ಸವ
ನಿನಗೆ ನಿತ್ಯೋತ್ಸವ ತಾಯಿ ನಿತ್ಯೋತ್ಸವ ॥೧॥

ಇತಿಹಾಸದ ಹಿಮದಲ್ಲಿನ
ಸಿಂಹಾಸನ ಮಾಲೆಯಲ್ಲಿ
ಗತ ಸಾಹಸ ಸಾರುತಿರುವ
ಶಾಸನಗಳ ಸಾಲಿನಲ್ಲಿ
ಓಲೆಗರಿಯ ಸಿರಿಗಳಲ್ಲಿ ದೇಗುಲಗಳ ಭಿತ್ತಿಗಳಲ್ಲಿ
ನಿತ್ಯೋತ್ಸವ ತಾಯಿ ನಿತ್ಯೋತ್ಸವ ॥ ೨ ॥

ಹಲವೆನ್ನದ ಹಿರಿಮೆಯೆ
ಕುಲವೆನ್ನದ ಗರಿಮೆಯೆ
ಸದ್ವಿಕಾಸ ಶೀಲ ನುಡಿಯ
ಲೋಕಾಮೃತ ಸೀಮೆಯೆ
ಈ ವತ್ಸರ ನಿರ್ಮತ್ಸರ ಮನದುದಾರ ಮಹಿಮೆಯೆ
ನಿತ್ಯೋತ್ಸವ ತಾಯಿ ನಿತ್ಯೋತ್ಸವ
ನಿನಗೆ ನಿತ್ಯೋತ್ಸವ ತಾಯಿ ನಿತ್ಯೋತ್ಸವ ॥ ೩ ॥

– ಕೆ.ಎಸ್. ನಿಸಾರ್‌ಅಹಮದ್

# ಪದ್ಯಪಾಠ – ೧

# ದುಡಿಮೆ

**ಪ್ರವೇಶಕ್ಕೆ ಮುನ್ನ :** ಮಕ್ಕಳೇ, ನಿಮ್ಮ ತಂದೆ ತಾಯಿ ಜೀವನೋಪಾಯಕ್ಕಾಗಿ ಮಾಡುವ ಕೆಲಸಗಳನ್ನು ಗಮನಿಸಿದ್ದೀರ? ಜೇನು ತುಪ್ಪಕ್ಕಾಗಿ ಜೇನು ಹುಳುಗಳ ಸತತ ಶ್ರಮದ ಅರಿವಿದೆಯೇ? ಹಾಗೆಯೇ ಮನುಷ್ಯ ಪ್ರಯತ್ನ ಮಾಡದೇ ಜೀವನದ ಪ್ರಗತಿಯ ಮೆಟ್ಟಿಲನ್ನು ಏರಿ ನಿಲ್ಲಲಾರ. ಅದಕ್ಕೆ ನಿರಂತರ ದುಡಿಮೆ ಬೇಕು ಎಂಬುದನ್ನು ಈ ಪದ್ಯದ ಮೂಲಕ ಅರಿಯೋಣವೇ?

ಸಿಪ್ಪೆಯ ಸುಲಿದು ತೆಗೆದರೆ ಮಾತ್ರ
ಹಣ್ಣಿನ ತಿರುಳನು ಮೆಲಬಹುದು;
ತೆಂಗಿನಕಾಯಿಯ ಚಿಪ್ಪನು ಒಡೆದರೆ
ಕೊಬ್ಬರಿ ತಿಳಲನು ತಿನಬಹುದು.

ಅಕ್ಕಿಯ ಸುಡುಸುಡು ನೀರೊಳು ಕುದಿಸಲು
ಗಮಗಮ ಅನ್ನವನುಣಬಹುದು;
ಅರಿವೆಯ ತಂದು ರಾಟೆಗೆ ಹೊಲಿದರೆ
ಚಂದದ ಅಂಗಿಯ ತೊಡಬಹುದು.



ಅಕ್ಷರ ಓದಲು ಬರೆಯಲು ಕಲಿತರೆ
ಕವಿತಾ ಕಥೆಗಳು ತಿಳಿಯುವವು;
ದಿನವೂ ತಪ್ಪದೆ ಶಾಲೆಗೆ ಹೋದರೆ
ಪ್ರಶ್ನೆಗೆ ಉತ್ತರ ಹೊಳೆಯುವವು.



ದಿನ ದಿನ ಹೂವಿನ ಬಂಡನು ಹೀರಲು
ಜೇನುತುಪ್ಪ ಕೊಡ ತುಂಬುವದು;
ಹನಿಹನಿ ಸೆಳಕಿನ ಮಳೆ ಸುರಿದಾಗಲೆ
ಹಳ್ಳ ಬಾವಿ ಕೆರೆ ತುಳುಕುವವು.

ಎಲ್ಲರು ತಮ್ಮಯ ಕೆಲಸವ ತಾವೇ
ಮಾಡಲು ದೇಶವು ಬೆಳೆಯುವದು;
ದುಡಿದರೆ ಮಾತ್ರವೆ ದೊಡ್ಡವನಾಗುವೆ
ಸ್ವಾತಂತ್ರ್ಯದ ಸವಿ ತಿಳಿಯುವದು.

– ಚನ್ನವೀರ ಕಣವಿ

**ಸಾಮರ್ಥ್ಯ : ಸರಿಯಾದ ಕ್ರಮದಲ್ಲಿ ಸ್ಪಷ್ಟವಾಗಿ ಬರೆಯುವುದು.**

**ಆಶಯ :** ಕೈ ಕೆಸರಾದರೆ ಬಾಯಿ ಮೊಸರು. ಕಾಯಕವೇ ಕೈಲಾಸ ಮೊದಲಾದ ಅನುಭವದ ನುಡಿಗಳು ದುಡಿಮೆಯ ಮಹತ್ವವನ್ನು ಸಾರುತ್ತವೆ. ಗುರಿಯನ್ನಿಟ್ಟುಕೊಂಡು ಕಷ್ಟಪಟ್ಟು ನಿರಂತರವಾಗಿ ಕೆಲಸ ಮಾಡುವುದರಿಂದ ಅನುಭವ ಮತ್ತು ಒಳ್ಳೆಯ ಫಲಗಳನ್ನು ಪಡೆಯಬಹುದು. ಆರಂಭಿಕ ಸಣ್ಣ ಪ್ರಯತ್ನಗಳು, ನಿರಂತರವಾಗಿ ಮಾಡುವ ಕೆಲಸ, ಸ್ವಾವಲಂಬನೆಯನ್ನು ತಂದು ಕೊಡುವುದರೊಂದಿಗೆ ಸ್ವಾತಂತ್ರ್ಯದ ಸವಿಯನ್ನು ಉಣಬಡಿಸುತ್ತವೆ. ಎಲ್ಲರೂ ದುಡಿಯಬೇಕು. ದುಡಿಮೆ ಇಲ್ಲದೆ ಬಾಳಿಲ್ಲ, ದೇಶದ ಪ್ರಗತಿಗೆ ದುಡಿಮೆಯೇ ಮೂಲ ಎಂಬುದೆ ಈ ಕವಿತೆಯ ಆಶಯ.

## ಕವಿ ಕೃತಿ ಪರಿಚಯ



ಚೆನ್ನವೀರಕಣವಿಯವರು ಈಗಿನ ಗದಗ ಜಿಲ್ಲೆಯ ಹೊಂಬಳದಲ್ಲಿ ೨೮-೦೬-೧೯೨೮ರಲ್ಲಿ ಜನಿಸಿದರು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಬಿ.ಎ. ಹಾಗೂ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟಣ ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರು ಕಾವ್ಯಾಕ್ಷಿ, ಭಾವಜೀವಿ, ಆಕಾಶಬುಟ್ಟಿ, ದೀಪಧಾರಿ, ನೆಲಮುಗಿಲು, ಜೀವಧ್ವನಿ, ಚಿರಂತನ ದಾಹ, ಮಣ್ಣಿನ ಮೆರವಣಿಗೆ ಮೊದಲಾದ ಕವನ ಸಂಕಲನಗಳನ್ನು ರಚಿಸಿದ್ದಾರೆ.



'ಹಕ್ಕಿಪುಚ್ಚ' ಇವರ ಶಿಶುಕಾವ್ಯ ಸಂಕಲನ. ಸಾಹಿತ್ಯಚಿಂತನ, ಕಾವ್ಯಾನುಸಂಧಾನ, ಸಮಾಹಿತ, ಸಮತೋಲನ ಇವರ ವಿಮರ್ಶಾ ಕೃತಿಗಳು. ೧೯೭೬ರಲ್ಲಿ ಹಾಸನದಲ್ಲಿ ನಡೆದ ೪೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. 'ಚೆಂಬೆಳಕು' ಇವರ ಅಭಿನಂದನ ಗ್ರಂಥ. ಇವರ 'ಜೀವಧ್ವನಿ' ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸಂದಿದೆ. ಇವರು ಪಂಪ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ. ಪ್ರಸ್ತುತ 'ದುಡಿಮೆ' ಕವನವನ್ನು 'ಕಣವಿ ಸಮಗ್ರಕಾವ್ಯ' ಕೃತಿಯಿಂದ ಆಯ್ದುಕೊಳ್ಳಲಾಗಿದೆ.

## ಓದಿ ತಿಳಿಯಿರಿ

ತಿಳಲು – ತಿರುಳು; ತಿರುಳು – ಸತ್ವ, ಸಾರ; ಚಿಪ್ಪು–ತೆಂಗಿನ ಕರಟ; ಮೆಲು – ತಿನ್ನು; ಅರಿವೆ–ಬಟ್ಟೆ; ಬಂಡು–ಮಕರಂದ; ತುಳುಕು–ತುಂಬಿಚೆಲ್ಲು, ಹೊರಚೆಲ್ಲು; ಸವಿ–ರುಚಿ;

## ಗಮನಿಸಿ ತಿಳಿಯಿರಿ

ಸೆಳಕು – ಒಂದು ಬಾರಿ ಬಂದು ನಿಲ್ಲುವ ಮಳೆಯ ಅವಧಿ.

ರಾಟೆ – ನೂಲುವ ಸಾಧನ, ಬಟ್ಟೆ ಹೊಲಿಯುವ ಯಂತ್ರ.

## ಪಠ್ಯ ಆಧಾರಿತ ಅಭ್ಯಾಸ

### ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧) ಹಣ್ಣಿನ ತಿರುಳನ್ನು ಮೆಲ್ಲುವುದು ಯಾವಾಗ ಸಾಧ್ಯ?

________________________________________

೨) ತೆಂಗಿನಕಾಯಿಯ ಚಿಪ್ಪನ್ನು ಒಡೆದರೆ ಏನು ದೊರೆಯುತ್ತದೆ?

________________________________________

೩) ಕವಿತೆ ಮತ್ತು ಕಥೆಗಳು ಯಾವಾಗ ತಿಳಿಯುತ್ತವೆ?

________________________________________

೪) 'ದುಡಿಮೆ' ಕವನ ಬರೆದ ಕವಿಯ ಹೆಸರೇನು?

________________________________________



### ಆ) ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧) ಅನ್ನವನುಣ್ಣಲು, ಅಂಗಿಯ ತೊಡಲು ಏನು ಮಾಡಬೇಕೆಂದು ಕವಿ ಹೇಳುತ್ತಾರೆ?

________________________________________

________________________________________

೨) ಜೇನುತುಪ್ಪದ ಕೊಡ, ಹಳ್ಳ, ಬಾವಿ, ಕೆರೆ, ಯಾವಾಗ ತುಂಬುವವು?

________________________________________

________________________________________

೩) ದೇಶ ಬೆಳೆಯಲು, ಸ್ವಾತಂತ್ರ್ಯದ ಸವಿ ತಿಳಿಯಲು ಏನು ಮಾಡಬೇಕು?

________________________________________

________________________________________

**ಇ) ಸರಿಯಾದ ಪದವನ್ನು ಆಯ್ಕೆ ಮಾಡಿ ಖಾಲಿ ಬಿಟ್ಟಿರುವ ಜಾಗವನ್ನು ಭರ್ತಿಮಾಡಿ.**

೧) ಅಕ್ಕಿಯ ಸುಡುಸುಡು ನೀರೊಳು ಕುದಿಸಲು ____________ ಅನ್ನವನುಣಬಹುದು.
(ಸುಡುಸುಡು, ಬಿಸಿಬಿಸಿ, ರಸರಸ, ಗಮಗಮ)

೨) ಹನಿಹನಿ ಸೆಳಕಿನ ____________ ಸುರಿದಾಗಲೆ ಹಳ್ಳ, ಬಾವಿ, ಕೆರೆ ತುಳುಕುವವು.
(ಮಳೆ, ಹಿಮ, ಜೇನು, ರಸ)

೩) ಅಕ್ಷರ ಓದಲು ಬರೆಯಲು ಕಲಿತರೆ ಕವಿತಾ, ____________ ಗಳು ತಿಳಿಯುವುವು.
(ಪುರಾಣ, ಕಾವ್ಯ, ನಾಟಕ, ಕಥೆ)

೪) ದುಡಿದರೆ ಮಾತ್ರವೆ ದೊಡ್ಡವನಾಗುವೆ ____________ ಸವಿ ತಿಳಿಯುವುದು.
(ಗೆಲುವಿನ, ಸ್ವಾತಂತ್ರ್ಯದ, ಕೀರ್ತಿಯ, ಊಟದ)

**ಈ) ಕ್ರಮವಾಗಿ ಹೊಂದಿಸಿ ಬರೆಯಿರಿ.**

| | ಅ | | ಆ | |
|---|---|---|---|---|
| ೧) | ಅಕ್ಷರ | – | ಕೊಬ್ಬರಿ | ____________ |
| ೨) | ಹೂವಿನ ಬಂಡು | – | ಅಂಗಿ | ____________ |
| ೩) | ಅರಿವೆ | – | ವದನ | ____________ |
| ೪) | ಅಕ್ಕಿ | – | ಜೇನುತುಪ್ಪ | ____________ |
| ೫) | ತೆಂಗಿನಕಾಯಿ | – | ಅನ್ನ | ____________ |
| | | | ಕವನ | ____________ |

ಉ) ಮೊದಲೆರಡು ಪದಗಳಿಗಿರುವ ಸಂಬಂಧದಂತೆ, ಮೂರನೇ ಪದಕ್ಕೆ ಸಂಬಂಧಿಸಿದ ಪದ ಬರೆಯಿರಿ.

೧) ಸಿಪ್ಪೆಯ ಸುಲಿದರೆ : ಹಣ್ಣಿನ ತಿರುಳು :: ಚಿಪ್ಪನು ಒಡೆದರೆ ____________

೨) ಅಕ್ಕಿಯ ಕುದಿಸಲು : ಗಮಗಮ ಅನ್ನ :: ಅರಿವೆಯ ಹೊಲಿದರೆ ____________

೩) ಅಕ್ಷರ ಕಲಿತರೆ : ಕವಿತಾ ಕಥೆ :: ಶಾಲೆಗೆ ಹೋದರೆ ____________

ಊ) ಗೆರೆ ಎಳೆದ ಪದಗಳನ್ನು ಬದಲಿಸಿ ಅರ್ಥಪೂರ್ಣ ವಾಕ್ಯಗಳನ್ನಾಗಿ ಬರೆಯಿರಿ.

೧) ಸಿಪ್ಪೆಯ ಸುಲಿದು ತೆಗೆದರೆ ಮಾತ್ರ ಹಣ್ಣಿನ ಸಿಪ್ಪೆಯ ಮೆಲಬಹುದು.

________________________________________

೨) ಎಲ್ಲರು ತಮ್ಮಯ ಕೆಲಸವ ಬೇರೆಯವರಿಗೆ ವಹಿಸಲು ದೇಶವು ಬೆಳೆಯುವುದು.

________________________________________

೩) ದುಡಿದರೆ ಮಾತ್ರ ಸಣ್ಣವನಾಗುವೆ ಸ್ವಾತಂತ್ರ್ಯದ ಸವಿ ತಿಳಿಯುವುದು.

________________________________________

ಋ) ಬಿಟ್ಟಿರುವ ಸ್ಥಳಗಳನ್ನು ಸರಿಯಾದ ಪದಗಳಿಂದ ಭರ್ತಿಮಾಡಿ.

೧) ಅರಿವೆಯ ತಂದು ____________ಗೆ ಹೊಲಿದರೆ ಚೆಂದದ ಅಂಗಿಯ ತೊಡಬಹುದು.

೨) ದಿನದಿನ ಹೂವಿನ ಬಂಡನು ಹೀರಲು ____________ ಕೊಡ ತುಂಬುವದು.

೩) ಎಲ್ಲರು ತಮ್ಮಯ ಕೆಲಸವ ತಾವೆ ಮಾಡಲು ____________ ಬೆಳೆಯುವುದು.

## ಸಾಮರ್ಥ್ಯ ಆಧಾರಿತ ಅಭ್ಯಾಸ

ಅ) ಮಾದರಿಯಂತೆ ಬರೆಯಿರಿ (ಅಕ್ಷರಗಳನ್ನು ಕ್ರಮವಾಗಿ ಜೋಡಿಸಿ ಅರ್ಥಪೂರ್ಣ ಪದ ರಚಿಸಿ).

ಮಾದರಿ: ಯಿತೆಂನಗಿಕಾ : ತೆಂಗಿನಕಾಯಿ

೧) ವಬೆಯುಳೆದು : ____________

೨) ಹುತೊಬದುಡ : ____________

೩) ವೆಡ್ಡದೊನಾವಗು : ____________________

೪) ಬಂಹೂಡುನವಿ : ____________________

**ಆ) ಪದಗಳನ್ನು ಸರಿಯಾದ ಕ್ರಮದಲ್ಲಿ ಬರೆದು ವಾಕ್ಯ ಮಾಡಿ.**

೧) ತಿಳಿಯುವವು / ಓದಲು ಬರೆಯಲು / ಕವಿತಾ ಕಥೆಗಳು / ಕಲಿತರೆ / ಅಕ್ಷರ.

____________________

೨) ಜೇನುತುಪ್ಪ / ಹೂವಿನ ಬಂಡನು/ ದಿನದಿನ / ಕೊಡ / ತುಂಬುವುದು / ಹೀರಲು.

____________________

೩) ದುಡಿದರೆ / ಸ್ವಾತ್ರಂತ್ರ್ಯದ / ತಿಳಿಯುವದು / ದೊಡ್ಡವನಾಗುವೆ / ಸವಿ / ಮಾತ್ರವೆ.

____________________



**ಇ) ಈ ಕೆಳಗಿನ ವಾಕ್ಯಗಳನ್ನು ಜೀವನದ ಹಂತಗಳ ಕ್ರಮದಲ್ಲಿ ಜೋಡಿಸಿ ಬರೆಯಿರಿ.**

೧. ಮುಪ್ಪು – ಬದುಕಿನ ಸಾರ್ಥಕತೆ, ವಿಶ್ರಾಂತಿಯ ಅವಧಿ

೨. ಬಾಲ್ಯ – ಮುಗ್ಧತೆ, ಸರಳತೆಗಳ ಸುಂದರ ಲೋಕ

೩. ಯೌವನ – ಸ್ಪರ್ಧೆ, ಸಾಧನೆ, ಬದುಕಿನ ಜವಾಬ್ದಾರಿಗಳ ನಿರ್ವಹಣೆಯ ಕಾಲ

____________________

____________________

____________________

## ಭಾಷಾ ಚಟುವಟಿಕೆ

೧. ಹನಿ ಹನಿ, ಬೇಗ ಬೇಗ, ಇಂತಹ ಒಂದೇ ಪದ ಎರಡು ಸಾರಿ ಪುನರಾವರ್ತನೆಗೊಳ್ಳುವ ಹತ್ತು ಪದಗಳನ್ನು ಬರೆಯಿರಿ.

____________________

____________________

೨. ಈ ಕೆಳಗಿನ ಪದಗಳಿಗೆ ಸರಿಯಾದ ಜೋಡಿ ಪದವನ್ನು ಆವರಣದಲ್ಲಿರುವ ಪದಗಳಿಂದ ಆಯ್ದು ಬರೆಯಿರಿ.

(ಪಾಠ, ಬರೆಹ, ಗೆಲುವು, ಪಕ್ಷಿ, ಇರುಳು, ಗದ್ದೆ, ಮೇಡು, ದುಮ್ಮಾನ, ಕರು, ಹಗಲು)

ಓದು ______________ ಹಗಲು______________ ಪಶು______________

ಇರುಳು______________ ಸೋಲು______________ ಹೊಲ______________

ಕಾಡು______________ ದುಃಖ______________ ದನ______________

**ಚಟುವಟಿಕೆ**

ಅ) ಬೆಳಿಗ್ಗೆ ಎದ್ದಾಗಿನಿಂದ ಈ ವರೆವಿಗೆ ನೀವು ಮಾಡಿದ ಕೆಲಸಗಳನ್ನು ಕ್ರಮವಾಗಿ ಪಟ್ಟಿ ಮಾಡಿ

ಆ) ದುಡಿಮೆಯನ್ನು ಕುರಿತಂತೆ ವಚನಕಾರರ ವಚನಗಳನ್ನು ಸಂಗ್ರಹಿಸಿ ಓದಿ.



## ಪೂರಕ ಓದು

### "ಪರಾವಲಂಬನದ ಪರಮಾನ್ನಕ್ಕಿಂತ ಸ್ವಾವಲಂಬನದ ಗಂಜಿಯೇ ಮೇಲು"

ಒಮ್ಮೆ ವಿದೇಶಿ ವಿಶ್ವವಿದ್ಯಾನಿಲಯವೊಂದರಲ್ಲಿ ಓದುತ್ತಿದ್ದ ಶ್ರೀಮಂತ ವಿದ್ಯಾರ್ಥಿಯೊಬ್ಬನ ಬೂಟು ಅಕಸ್ಮಾತ್ ಹರಿದು ಚಮ್ಮಾರನ ಹತ್ತಿರ ಹೋಗಬೇಕಾಯಿತು. ಹರಿದ ಬೂಟನ್ನು ಬೂಟು ಹೊಲಿಯುವವನ ಮುಂದಿಟ್ಟು "ಬೇಗ ಹೊಲೆದು ಕೊಡು" ಎಂದು ಅವಸರಿಸಿದ. "ಸ್ವಾಮಿ ಕೆಲಸ ಜಾಸ್ತಿ ಇದೆ. ತಕ್ಷಣ ಬೇಕಾದರೆ ನೀವೇ ಹೊಲೆದುಕೊಳ್ಳಿ" ಎಂದು ಚಮ್ಮಾರ ಹೊಲಿಯುವ ಸಾಮಗ್ರಿಗಳನ್ನು ಮುಂದಿಟ್ಟ. ವಿದ್ಯಾರ್ಥಿಗೆ ಕೋಪ ಬಂತು. "ನಾನು ಸ್ನಾತಕೋತ್ತರ ಪದವಿ ಪಡೆಯಲು ಓದಲು ಬಂದಿರುವವ ಬೂಟು ಹೊಲಿಯಬೇಕೆ? ನಿನಗಿದು ಹೊಟ್ಟೆ ಪಾಡು ಬಡತನವಿರುವ ನಿನಗಿದು ಅನಿವಾರ್ಯ ನನಗಲ್ಲ" ಎಂದ.

ಆ ಚಮ್ಮಾರ ನಕ್ಕು ಹೇಳಿದ "ವಿದೇಶದಿಂದ ಬಂದು ವ್ಯಾಸಂಗ ಮಾಡುತ್ತಿದ್ದ ಮಾತ್ರಕ್ಕೆ, ಶ್ರೀಮಂತರಾಗಿರುವ ಮಾತ್ರಕ್ಕೆ, ನಮ್ಮ ಕೆಲಸ ನಾವು ಮಾಡಿಕೊಳ್ಳಬಾರದೇ? ನಾನೂ ಈ ವಿಶ್ವವಿದ್ಯಾನಿಲಯದಲ್ಲಿನ ಒಬ್ಬ ಪ್ರತಿಭಾವಂತ ವಿದ್ಯಾರ್ಥಿ ನನ್ನ ತಂದೆ ಕೋಟ್ಯಾಧೀಶರು. ಆದರೆ

ನಾನು ನನ್ನ ವಿದ್ಯಾಭ್ಯಾಸದ ಖರ್ಚಿಗಾಗಿ ಸ್ವಾವಲಂಬನೆಯಿಂದ ನಾನೇ ಗಳಿಸುತ್ತಿದ್ದೇನೆ. ಹಾಗಾಗಿ ಅದರ ಬಗ್ಗೆ ನನಗೆ ಹೆಮ್ಮೆ ಇದೆ". ಎನ್ನುತ್ತ ಬೂಟನ್ನು ಹೊಲಿದುಕೊಟ್ಟ. ಈ ವಿದ್ಯಾರ್ಥಿಗೆ ತನ್ನ ಬಗ್ಗೆ ಅವಮಾನವೆನಿಸಿತು. ತನ್ನನ್ನು ಓದಲು ಕಳಿಸಿದ ತನ್ನ ದೇಶ, ತಂದೆ-ತಾಯಿಯನ್ನು ನೆನೆದು ಕಣ್ಣು ತುಂಬಿ ಬಂತು. ತಾನೂ ಸ್ವಾವಲಂಬನೆಯಿಂದ ಬದುಕುವ ಬಗ್ಗೆ ಯೋಚಿಸುತ್ತ ಹೊರಬಂದ.

೧) ನಿಮ್ಮ ಗಮನಕ್ಕೆ ಬಂದ ಇಂತಹ ಒಂದು ಘಟನೆಯನ್ನು ಕ್ರಮವಾಗಿ ಬರೆಯಿರಿ.

೨) ದುಡಿಮೆಯ ಮಹತ್ವವನ್ನು ತಿಳಿಸುವ ಈ ಗಾದೆಮಾತುಗಳನ್ನು ಓದಿರಿ.

೧. ಕೂತು ಉಂಬುವವನಿಗೆ ಕುಡಿಕೆ ಹಣ ಸಾಲದು.

೨. ಕೈ ಕೆಸರಾದರೆ ಬಾಯಿ ಮೊಸರು.

೩. ಮಾಡಿದವ ಉಂಡ, ಮಲಗಿದವ ಕೆಟ್ಟ.

೪. ರೆಟ್ಟೆ ಮುರಿಯಬೇಕು, ರೊಟ್ಟಿ ತಿನ್ನಬೇಕು.

೫. ಆಳಾಗಿ ದುಡಿ, ಅರಸನಾಗಿ ಉಣ್ಣು.

೬. ಉದ್ಯೋಗಕ್ಕೆ ಸಮನಾದ ಬಂಧುವಿಲ್ಲ.

೭. ಕಾಯಕವೇ ಕೈಲಾಸ.

# ಗದ್ಯಪಾಠ – ೨

## ನಾವೂ ನಿಮ್ಮಂತೆ

**ಪ್ರವೇಶಕ್ಕೆ ಮುನ್ನ :** ನಿತ್ಯವು ಒಂದು ಕೋಳಿ ಬೆಳಗಿನಜಾವ ಕೂಗತೊಡಗಿತು.ಇದನ್ನು ಗಮನಿಸಿದ ಬೆಕ್ಕು ಕೋಳಿಗೆ ಬೈಯಲು ಪ್ರಾರಂಭಿಸಿತು."ಎಲ್ಲರ ನಿದ್ದೆಯನ್ನು ನಿನ್ನ ಕರ್ಕಶವಾದ ಧ್ವನಿಯಿಂದ ಹಾಳು ಮಾಡಬೇಡ"ಎಂದು ಹೇಳಿತು. ಅದಕ್ಕೆ ಕೋಳಿ "ಆ ರೀತಿ ಹೇಳಬೇಡ ಜನರ ನಿದ್ದೆಯನ್ನು ಹಾಳು ಮಾಡುವುದು ನನ್ನ ಉದ್ದೇಶವಲ್ಲ, ನನ್ನ ಕೂಗುವಿಕೆ ಜನರಿಗೆ ಒಂದು ರೀತಿಯ ಸೇವೆಯಾಗಿದೆ. ಬೆಳಗಾಗುತ್ತಿರುವುದನ್ನು ನನ್ನ ಕೂಗು ಸೂಚಿಸುತ್ತದೆ. ಮಲಗಿದ್ದವರನ್ನು ಬೇಗ ಎಬ್ಬಿಸಿ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗುವಂತೆ ಜನರಿಗೆ ಪ್ರೇರೇಪಿಸುತ್ತದೆ ಎಂದಿತು. ಕೋಳಿಯ ಮಾತಿಗೆ ಬೆಕ್ಕು ತೆಪ್ಪಗಾಗಿ ಅಡುಗೆ ಮನೆ ಸೇರಿತು. ಮಕ್ಕಳೇ, ಹೀಗೆ ಪ್ರಾಣಿಗಳಿಂದ ನಮಗೆ ತುಂಬಾ ಪ್ರಯೋಜನವಿದೆ ಅಲ್ಲವೇ? ನೀವು ಪ್ರಾಣಿಗಳನ್ನು ಇಷ್ಟ ಪಡುವಿರಾ? ನಾವು ಸಾಕು ಪ್ರಾಣಿಗಳಲ್ಲದೆ ಕಾಡು ಪ್ರಾಣಿಗಳನ್ನು ಇಷ್ಟ ಪಡಬೇಕಲ್ಲವೇ? ಕಾಡು ಪ್ರಾಣಿಗಳಿಗೆ ಕಷ್ಟ ಬಂದಾಗ ತಮ್ಮ ರಾಜನ ಬಳಿಗೆ ಹೋಗಿ ತಮ್ಮ ಅಳಲನ್ನು ತೋಡಿಕೊಂಡ ಬಗೆಯನ್ನು ಈ ಚಿತ್ರಕಥೆಯಿಂದ ತಿಳಿಯಹುದು.














೫

ಬೇಡ ಬೇಡ! ನಾವು ಊರಿಗೆ ಹೋಗುವುದು ಬೇಡ. ಏಕೆಂದರೆ ಜನರು ಗಾಬರಿಗೊಳ್ಳಬಹುದು. ಅದರಿಂದ ನಮಗೇ ತೊಂದರೆ ಆಗಬಹುದು.

(ಅಷ್ಟರಲ್ಲಿ ಜಿಂಕೆಗಳ ಹಿಂಡು ಬಂದು ಸೇರಿತು)

೬

ಜಿಂಕೆಗಳೇ, ನೀವೆಲ್ಲಾ ಎಲ್ಲಿಂದ ಬರುತ್ತಿರುವಿರಿ.

ರಾಜಾ, ನಾವೆಲ್ಲಾ ಊರ ಕಡೆಗೆ ಹೋಗಿದ್ದೆವು. ಊರೆಲ್ಲಾ ಸುತ್ತಾಡಿ, ಈಗ ಅಲ್ಲಿಂದ ಬರುತ್ತಿದ್ದೇವೆ

೭

ಏನು? ಊರೆಲ್ಲಾ ಸುತ್ತಾಡಿಕೊಂಡು ಬಂದಿರಾ! ನಿಮಗೇನು ತೊಂದರೆ ಆಗಲಿಲ್ಲವೇ?

ಇಲ್ಲ ಮಹಾರಾಜಾ, ಊರಿನಲ್ಲಿಯೂ ಪ್ರಾಣಿಗಳಾದ ನಮ್ಮ ಬಗ್ಗೆ ಬಹಳ ಕಾಳಜಿ ಇದೆ. ಫಲಕಗಳ ಮೇಲೆ ಅಲ್ಲಲ್ಲಿ ನಮ್ಮ ಚಿತ್ರಗಳನ್ನು ಬರೆದು ಕೆಳಗೆ ಅಕ್ಷರಗಳಲ್ಲಿ ಏನೋ ಬರೆದಿದ್ದಾರೆ.

(ಎಲ್ಲವೂ ಊರ ಕಡೆ ಹೋಗಲು ಸಿದ್ಧವಾದವು ಆಗ ರಾಜ)

೮

ಬೇಡ, ಬೇಡ! ನಾವು ಎಲ್ಲರು ಊರಿಗೆ ಹೋಗುವುದು ಬೇಡ, ನರಿಗೆ ಊರ ಪರಿಚಯ ಚೆನ್ನಾಗಿದೆ. ನರಿರಾಯ ಮಾತ್ರ ಜಿಂಕೆಯೊಂದಿಗೆ ಹೋಗಲಿ. ಭಿತ್ತಿ ಪತ್ರವನ್ನು ಓದಿಕೊಂಡು ಬಂದು ನಮಗೆ ಹೇಳಲಿ.










೧೨ **ಸಿಂಹ ಹೇಳಿತು:**

ಪ್ರಜೆಗಳೇ ಮಾನವರಿಗೂ ನಮ್ಮ ಬಗ್ಗೆ ಪ್ರೀತಿ ಕಾಳಜಿ ಇದೆ ಎಂದಾಯಿತು. ನಾವೂ ಕೂಡ ಜನರಿಗೆ ತೊಂದರೆ ಕೊಡಬಾರದು. ತಿಳಿಯಿತೆ?

**ಸಾಮರ್ಥ್ಯ : ಚಿತ್ರ ಸಹಿತ ಕಥೆ ಮತ್ತು ಭಿತ್ತಿ ಪತ್ರಗಳನ್ನು ಓದುವುದು.**

**ಆಶಯ :** ನಾವು ಅಭಯಾರಣ್ಯಗಳನ್ನು ಸಂರಕ್ಷಿಸಿ, ಕಾಡುಪ್ರಾಣಿಗಳು ಕಾಡುಗಳಲ್ಲಿಯೇ ನೆಮ್ಮದಿಯಿಂದ ಜೀವಿಸುವಂತೆ ಸಹಕರಿಸಬೇಕು. ಅವುಗಳಿಗೂ ನಮ್ಮಂತೆಯೇ ಬದುಕುವ ಹಕ್ಕಿದೆ ಎಂಬುದನ್ನು ತಿಳಿಸುವುದೇ ಈ ಪಾಠದ ಆಶಯವಾಗಿರುತ್ತದೆ.

## ಓದಿ ತಿಳಿಯಿರಿ

ಹಿಂಡು–ಗುಂಪು; ಕಾಳಜಿ–ಜವಾಬ್ಧಾರಿ, ಆಸಕ್ತಿ; ಭಿತ್ತಿ–ಗೋಡೆ; ಗಾಬರಿ–ಭಯ, ಹೆದರಿಕೆ.

## ಗಮನಿಸಿ ತಿಳಿಯಿರಿ

ಭಿತ್ತಿಪತ್ರ – ಗೋಡೆಗೆ ಹಾಕಿದ ಪ್ರಕಟಣೆ

ಪರಸ್ಪರ – ಒಬ್ಬರಿಂದೊಬ್ಬರಿಗೆ ಸಂಬಂಧಪಟ್ಟ

## ಪಠ್ಯ ಆಧಾರಿತ ಅಭ್ಯಾಸ

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಒಂದು ದಿನ ಪ್ರಾಣಿಗಳೆಲ್ಲವೂ ಯಾರ ಬಳಿಗೆ ಹೋದವು?

___

೨. ಆನೆಯು ಸಿಂಹದೊಂದಿಗೆ ಏನೆಂದು ಹೇಳಿತು?

___

೩. ಜಿಂಕೆಗಳ ಹಿಂಡು ಎಲ್ಲಿಗೆ ಹೋಗಿ ಬರುತ್ತಿದ್ದವು?

___

೪. ಭಿತ್ತಿ ಪತ್ರ ಎಂದರೇನು?

___

**ಆ) ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಪ್ರಾಣಿಗಳು ಊರಿಗೆ ಹೋದರೆ ಏನಾಗಬಹುದೆಂದು ಸಿಂಹವು ಹೇಳಿತು?

___

___

೨. ಭಿತ್ತಿ ಪತ್ರದಲ್ಲಿ ಏನೆಂದು ಬರೆದಿತ್ತು?

೩. ಸಿಂಹವು ಪ್ರಾಣಿಗಳಿಗೆ ಏನೆಂದು ಸಲಹೆ ನೀಡಿತು?

**(ಇ) ಈ ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು?**

೧. "ಅದಕ್ಕೆ ನಾನೇನು ಮಾಡಬೇಕು?"

೨. "ನಾವು ಊರಿಗೆ ಹೋಗುವುದು ಬೇಡ, ಏಕೆಂದರೆ ಜನರು ಗಾಬರಿಗೊಳ್ಳಬಹುದು."

೩. "ಪ್ರಜೆಗಳೇ, ಜನರಿಗೂ ನಮ್ಮ ಬಗ್ಗೆ ಪ್ರೀತಿ ಕಾಳಜಿ ಇದೆ".



## ಸಾಮರ್ಥ್ಯ ಆಧಾರಿತ ಅಭ್ಯಾಸ

**(ಅ) ಈ ಭಿತ್ತಿ ಪತ್ರವನ್ನು ಓದಿಕೊಂಡು ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

ಕಾಡಿದ್ದರೆ ನಾಡು,

ಗಿಡ ಬೆಳೆಸಿ ನಾಡು ಉಳಿಸಿ

ಸಕಲ ಪ್ರಾಣಿಗಳಲ್ಲಿ ದಯೆ ಇರಲಿ

೧. ನಾಡು ಉಳಿಯಲು ಏನನ್ನು ಬೆಳೆಸಬೇಕು?

೨. ಈ ಭಿತ್ತಿ ಪತ್ರವು ಯಾವ ಯಾವ ವಿಷಯಗಳಿಗೆ ಹೆಚ್ಚು ಒತ್ತು ನೀಡಿದೆ ?

| |
|---|
| ಹೆಣ್ಣೊಂದು ಕಲಿತರೆ<br>ಶಾಲೆಯೊಂದು ತೆರೆದಂತೆ |

೧. ಈ ಭಿತ್ತಿಪತ್ರ ಯಾವ ವಿಷಯಕ್ಕೆ ಸಂಬಂಧಿಸಿದೆ?

______________________

| |
|---|
| ಮಕ್ಕಳಿಗೆ ಆಸ್ತಿ ಮಾಡದೆ<br>ಮಕ್ಕಳನ್ನೇ ಆಸ್ತಿಯನ್ನಾಗಿ ಮಾಡಿ.<br>ನಿಮ್ಮ ಮಗುವನ್ನು ಕಡ್ಡಾಯವಾಗಿ<br>ಶಾಲೆಗೆ ಕಳುಹಿಸಿ. |

೧. ಈ ಭಿತ್ತಿಪತ್ರ ಯಾವ ವಿಷಯಕ್ಕೆ ಸಂಬಂಧಿಸಿದೆ?

______________________

೨. ಈ ಭಿತ್ತಿ ಪತ್ರದಲ್ಲಿರುವ ಅಂಶವು ಯಾರಿಗೆ ತಿಳಿ ಹೇಳುವಂತಿದೆ?

______________________

## ಆ) ಚಿತ್ರ ಸರಣಿಯನ್ನು ನೋಡಿ ಕಥೆಯನ್ನು ಬರೆಯಿರಿ.








______________________

______________________

______________________

______________________

______________________

______________________

______________________

## ಭಾಷಾ ಚಟುವಟಿಕೆ

## ಅ) ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.

೧. ಸಿಂಹವು ಬಹಳ ______________

ಅ) ಅಂಜುಬುರುಕ ಪ್ರಾಣಿ ಆ) ಗಂಭೀರ ನಡಿಗೆಯ ಪ್ರಾಣಿ

೨. ಆನೆಯು ಕಾಡಿನಲ್ಲಿ ______________

ಅ) ಒಂಟಿಯಾಗಿ ವಾಸಿಸುತ್ತದೆ ಆ) ಗುಂಪಿನಲ್ಲಿ ವಾಸಿಸುತ್ತದೆ.

## ಚಟುವಟಿಕೆ

ಅ. ಓದಿ ತಿಳಿಯಿರಿ.

- ಸಾರ್ವಜನಿಕರ ಆಸ್ತಿ ರಕ್ಷಣೆ ನಮ್ಮ ಹೊಣೆ
- ಹಸಿರೇ ಉಸಿರು
- ಪ್ರಾಣಿಗಳಲ್ಲಿ ದಯೆ ಇರಲಿ
- ಪೋಲಿಯೋ ಲಸಿಕೆ ಹಾಕಿಸಿ. ಪೋಲಿಯೋ ರೋಗದಿಂದ ಮುಕ್ತಿ ಪಡೆಯಿರಿ,

ಆ. ನೀವು ನೋಡಿರುವ ಭಿತ್ತಿಪತ್ರದ ಬಗ್ಗೆ ನಿಮ್ಮ ಸ್ನೇಹಿತರೊಂದಿಗೆ ಚರ್ಚಿಸಿ.

******

## ಪೂರಕ ಓದು

## ಪರಸ್ಪರ



ಒಂದು ನದಿ. ಆ ನದಿಗೆ ಒಂದೇ ಸೇತುವೆ. ಸೇತುವೆಯ ಎರಡೂ ತುದಿಗಳಿಂದ ಎದುರು ಬದುರು ಎರಡು ಟಗರು ಬಂದವು. ಸೇತುವೆ ಚಿಕ್ಕದಾಗಿತ್ತು. ಅವು ಎರಡೂ ಒಟ್ಟಿಗೆ ಸೇತುವೆ ದಾಟಿ ಹೋಗಲಾಗಲಿಲ್ಲ. ಆಗ ಎರಡೂ ಟಗರುಗಳು ನಾನು ಮೊದಲು ದಾಟಬೇಕು, ನಾನು ಮೊದಲು ದಾಟಬೇಕೆಂದು ಜಗಳವಾಡತೊಡಗಿದವು. ಸ್ವಲ್ಪ ಸಮಯದ ನಂತರ "ನಾವು ಏಕೆ ಜಗಳವಾಡಬೇಕು? ರಸ್ತೆ ಇರೋದೇ ಇಷ್ಟು" ಎಂದು ಯೋಚಿಸಿದವು. ಒಂದು ಟಗರು ಯೋಚಿಸಿ ಹೇಳಿತು. "ನೀನು ಸೇತುವೆ ಮೇಲೆ ಮಲಗಿಕೋ, ನಾನು ನಿನ್ನ ಮೇಲೆ ಹಾರಿ ಆ ದಡಕ್ಕೆ ಹೋಗುತ್ತೇನೆ. ಅನಂತರ ನೀನು ಸುಲಭವಾಗಿ ಸೇತುವೆ ದಾಟಬಹುದು" ಎಂದಿತು. ಅದರಂತೆ ಮಾಡಿದವು ಎರಡೂ ಟಗರುಗಳು ಸಂತೋಷದಿಂದ ಮನೆಗೆ ಹೋದವು.

ಅ. ಪ್ರಶ್ನೆಗಳಿಗೆ ಉತ್ತರಿಸಿರಿ.

೧. ಟಗರುಗಳಿಗೆ ಸೇತುವೆ ದಾಟಲು ಏಕೆ ಕಷ್ಟವಾಯಿತು?

೨. ಕೊನೆಗೆ ಟಗರುಗಳು ಸೇತುವೆಯನ್ನು ಹೇಗೆ ದಾಟಿದವು?

# ಗದ್ಯಪಾಠ – ೩

## ತರಗತಿಗೊಂದು ಫಲಕ

**ಪ್ರವೇಶಕ್ಕೆ ಮುನ್ನ :** ಪಠ್ಯ ಪುಸ್ತಕ, ಸಮಾಚಾರ ಪತ್ರಿಕೆ, ಆಮಂತ್ರಣ ಪತ್ರಿಕೆ ಇವುಗಳಲ್ಲಿನ ವಿಷಯಗಳು ಮುದ್ರಿತ ರೂಪದಲ್ಲಿವೆ. ನಾವು ಮುದ್ರಿತ ವಿಷಯಗಳನ್ನು ಓದುವ ಜೊತೆಗೆ ಕೈಬರೆಹದಲ್ಲಿರುವ ವಿಷಯಗಳನ್ನು ಸಹ ಓದಿ ತಿಳಿಯುತ್ತೇವೆ. ಅಲ್ಲದೆ ಹೇಳಬೇಕಾದುದನ್ನು ಅಥವಾ ಯೋಚಿಸಿದ್ದನ್ನು ಕೈಬರೆಹದಲ್ಲಿ ಬರೆಯುತ್ತೇವೆ. ಹೌದು! ಶಾಲಾ ಫಲಕದಲ್ಲಿನ ಲೇಖನಗಳು ಕೈಬರೆಹದಲ್ಲಿರುತ್ತವೆ. ಶಾಲಾ ಫಲಕದಲ್ಲಿರುವ ಲೇಖನಗಳನ್ನು ಇಲ್ಲಿ ನೀಡಲಾಗಿದೆ. ಓದಿ ವಿಷಯ ತಿಳಿಯುವ ಜೊತೆಗೆ ಕೈಬರೆಹದಲ್ಲಿನ ವೈವಿಧ್ಯ ತಿಳಿಯಿರಿ.

ಮಕ್ಕಳು ತಮ್ಮ ಲೇಖನಗಳನ್ನು ಶಿಕ್ಷಕಿಯ ನೆರವಿನಿಂದ ಪ್ಯಾನಲ್ ಬೋರ್ಡ್‌ನಲ್ಲಿ ಜೋಡಿಸಿದರು. ಮಕ್ಕಳ ಕಾರ್ಯವನ್ನು ಶಿಕ್ಷಕಿ ಮೆಚ್ಚಿದರು. ಲೇಖನಗಳನ್ನು ರಾಧಾಳಿಂದ ಓದಿಸಿದರು. ಅಲ್ಲಿನ ವಿಷಯಗಳನ್ನು ಮನವರಿಕೆ ಮಾಡಿದರು. ಅನಂತರ ಎಲ್ಲರೂ ಮೆಲುಧ್ವನಿಯಲ್ಲಿ ಓದಲು ಸೂಚಿಸಿದರು.

ಮಕ್ಕಳೇ, ನೀವೆಲ್ಲ ಲೇಖನಗಳನ್ನು ಓದಿದಿರಿ ಅಲ್ಲವೇ? ಹಾಗಾದರೆ ಅದರಲ್ಲಿರುವ ವಿಷಯಗಳು ಯಾವುವು? ಯಾರಾದರೂ ಹೇಳಬಲ್ಲಿರಾ? ಎಂದು ಶಿಕ್ಷಕಿ ಕೇಳಿದರು. ಥಾಮಸ್ ಲೇಖನಗಳನ್ನು ಹೆಸರಿಸಿದನು.





# ಫಲಕ

### ಮೈಸೂರು ಅರಮನೆ

ಕನ್ನಡ ನಾಡಿನ ಭವ್ಯ ಸೌಧ ಮೈಸೂರು ಅರಮನೆ. ಇದು ಜಗತ್ ಪ್ರಸಿದ್ಧ. ಹಿಂದೆ ಮೈಸೂರನ್ನು ಆಳಿದ ಒಡೆಯರ್ ವಂಶಜರು ಇದರ ನಿರ್ಮಾತೃಗಳು. ವಾಸ್ತು ಶಿಲ್ಪಿಗಳು ಬ್ರಿಟನ್ನಿನ ಹೆನ್ರಿ ಇರ್ವಿನ್ ಮತ್ತು ಭಾರತದ ಬಿ.ರಾಘವಲು ನಾಯ್ಡು.

ಅರಮನೆಯ ಹೊರ - ಒಳ ನೋಟವು ಸುಂದರ. ಪ್ರತಿ ಭಾಗವೂ ಅತ್ಯುತ್ತಮವಾಗಿ ಅಲಂಕೃತಗೊಂಡಿದೆ. ರಾತ್ರಿ ವೇಳೆ ಲಕ್ಷಾಂತರ ವಿದ್ಯುದ್ದೀಪಗಳಿಂದ ಕಂಗೊಳಿಸುತ್ತದೆ.

- ಅಡವಿಯಪ್ಪ, ೯ ನೇ ತರಗತಿ

### ವಾಕ್ ಶ್ರವಣ ಸಂಸ್ಥೆ

ಇದು ವಾಕ್. ಶ್ರವಣ ದೋಷಗಳ ಅಖಿಲ ಭಾರತ ಮಟ್ಟದ ಚಿಕಿತ್ಸಾ ಕೇಂದ್ರ. ಇದು ಮೈಸೂರಿನ ಮಾನಸಗಂಗೋತ್ರಿಯಲ್ಲಿದೆ. ಮಕ್ಕಳಲ್ಲಿ ಕಂಡು ಬರುವ ಕುಂಠಿತಗೊಂಡ ಮಾತಿನ ಬೆಳವಣಿಗೆ, ಬುದ್ಧಿ ಮಾಂದ್ಯತೆ. ಮಿದುಳಿನ ತೊಂದರೆ. ಶ್ರವಣ ದೋಷ. ಉಗ್ಗುವಿಕೆ. ಅರ್ಥ ಮಾಡಿಕೊಳ್ಳುವಲ್ಲಿ ತೊಂದರೆ, ಕಲಿಕೆ ತೊಂದರೆ ಇತ್ಯಾದಿ ತೊಂದರೆಗಳಿಗೆ ಇಲ್ಲಿ ಚಿಕಿತ್ಸೆ ದೊರೆಯುತ್ತದೆ.

- ಮನೋಹರ ೯ನೇ ತರಗತಿ

### ಫರ್ಡಿನೆಂಡ್ ಕಿಟೆಲ್

ಇಂಗ್ಲಿಷ್ ಭಾಷಿಕರು ಕನ್ನಡವನ್ನು ತಿಳಿಯಲು ಇಂಗ್ಲಿಷ್-ಕನ್ನಡ ನಿಘಂಟನ್ನು ಸಿದ್ಧ ಪಡಿಸಿದ ಕೀರ್ತಿ ಕಿಟೆಲ್‌ಗೆ ಸಲ್ಲುತ್ತದೆ. ಜರ್ಮನ್ ದೇಶದ ಈತನು ಭಾರತಕ್ಕೆ ಪಾದ್ರಿಯಾಗಿ ನೇಮಕಗೊಂಡವನು. ಮಂಗಳೂರಿನಲ್ಲಿದ್ದಾಗ ಕನ್ನಡ ವ್ಯಾಸಂಗ ಪ್ರಾರಂಭಿಸಿ ಬಹಳ ಯಶಸ್ಸು ಸಾಧಿಸಿದನು.

ನಿಘಂಟಿನ ಕಾರ್ಯವು 1872ರಲ್ಲಿ ಪ್ರಾರಂಭವಾಯಿತು. 1892ರಲ್ಲಿ 70,000 ಶಬ್ದಗಳನ್ನು ಒಳಗೊಂಡ ಹಸ್ತಪ್ರತಿಯನ್ನು ಕನ್ನಡ ಮಿತ್ರರ ನೆರವಿನಲ್ಲಿ ಮುದ್ರಿಸಿ 1894ರಲ್ಲಿ ಪ್ರಕಟಿಸಲಾಯಿತು.

ವಿನೋದ. 7ನೇ ತರಗತಿ

### ಚಂದ್ರಶೇಖರ ಕಂಬಾರ

ಕನ್ನಡಕ್ಕೆ ಎಂಟನೇ ಜ್ಞಾನಪೀಠ ಪ್ರಶಸ್ತಿ ತಂದವರು ಕಂಬಾರರು. ಇವರು ಪ್ರಸಿದ್ಧ ಕವಿ ನಾಟಕಕಾರ, ಜಾನಪದ ತಜ್ಞ, ಚಲನಚಿತ್ರ ನಿರ್ದೇಶಕ. ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಯಾದವರು.

ಕಂಬಾರರು ಕಾವ್ಯ, ನಾಟಕ, ಕಾದಂಬರಿ, ಮತ್ತು ಜಾನಪದ ಕ್ಷೇತ್ರದಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ದೊರಕಿವೆ.

- ಅರ್ಜುನ, 7ನೇ ತರಗತಿ

# ಫಲಕ

### ಪಿಸುಮಾತಿನ ಗುಂಬಜ್

ಇದು ಬಿಜಾಪುರದಾಗ ಐತಿ. ಬಾಳ ದೊಡ್ಡ ಗಾತ್ರದ ಗುಂಬಜಗಳ ಪೈಕಿ ದೊಡ್ಡದಾದ ಒಂದು ಗೋಲಾಕಾರದ್ದು ಗುಮ್ಮಟ ಐತಿ. ಈ ಕಾರಣದಾಗ ಇದಕ ಗೋಲಗುಂಬಜ್ ಅಂತ ಹೆಸರು ಬಂದೈತಿ. ಗುಮ್ಮಟದಾಗ ಮೆಲ್ಲ ಮಾತಾಡಿದ್ರ ೭ ಸಲ ಮತ್ತ ಕೇಳಸ್ತೈತಿ. ಪ್ರತಿಧ್ವನಿ ಆಕ್ಕೈತಿ. ಈ ಗುಮ್ಮಟದ ವ್ಯಾಸ 124 ಅಡಿ ಐತಿ. ಒಂದಾ ತುದಿ ಒಳಗ ನಿಂತು ಪಿಸುದನಿ ಮಾತಾಡಿದ್ರ ಎಲ್ಲ ಕಡಿ ಚಲೋ ಕೇಳಸ್ತೈತಿ

ಎಲ್ಲಮ್ಮ, ೭ನೇ ತರಗತಿ

### ಕಾಳಿನದಿ

ಕನ್ನಡ ನಾಡು ಹಲವು ನದಿಗಳ ತಾಣ. ಅವುಗಳಲ್ಲಿ ಕಾಳಿನದಿಯು ಒಂದು. ಇದು ಉತ್ತರ ಕನ್ನಡ ಜಿಲ್ಲೆಯ ನದಿ. ಪಶ್ಚಿಮ ಘಟ್ಟದಲ್ಲಿ ಹುಟ್ಟಿ ಹಳಿಯಾಳ, ಯಲ್ಲಾಪುರ ತಾಲ್ಲೂಕುಗಳಲ್ಲಿ ಹರಿದು ಕಾರವಾರದ ಬಳಿ ಅರಬ್ಬೀ ಸಮುದ್ರ ಸೇರುತ್ತದೆ. ನದಿಯ ಮಾರ್ಗ ದಟ್ಟವಾದ ಅರಣ್ಯ-ಪರ್ವತಗಳಿಂದ ಕೂಡಿದ್ದು ನೀರಾವರಿಗೆ ಹೆಚ್ಚು ಸಹಕಾರಿಯಾಗಿಲ್ಲ.

ಕಾಳಿ ಜಲವಿದ್ಯುತ್ ಯೋಜನೆಯ ಮುಖ್ಯ ಜಲಾಶಯವನ್ನು ಸೂಪಾದ ಬಳಿ ನಿರ್ಮಿಸಲಾಗಿದೆ. ಕಟ್ಟೆಯ ಎತ್ತರ 320 ಅಡಿಗಳಿದ್ದು 10 ಲಕ್ಷ ಕಿಲೋವ್ಯಾಟ್ ವಿದ್ಯುತ್ ಉತ್ಪಾದನೆಯಾಗುತ್ತಿದೆ.

– ಕಲ್ಲೂರಪ್ಪ, ೭ನೇ ತರಗತಿ.

### ಜ್ಞಾನ ಗಂಗೋತ್ರಿ

ಇದು ಕಿರಿಯರ ವಿಶ್ವಕೋಶ. ಇದರಲ್ಲಿ ಮನುಕುಲದ ಕಥೆ, ಜೀವಜಗತ್ತು, ಭೌತ ಜಗತ್ತು, ಯಂತ್ರಜಗತ್ತು, ಕಲೆ ಸಾಹಿತ್ಯ, ಕ್ರೀಡೆ-ಮನೋಲ್ಲಾಸ, ಭಾರತದ ಕಥೆ ಎಂಬ ಏಳು ಸಂಪುಟಗಳಿವೆ.

ಇದರಲ್ಲಿ 5782 ಲೇಖನಗಳು, 3800 ರೇಖಾ ಚಿತ್ರಗಳು, 3750 ಛಾಯಾ ಚಿತ್ರಗಳು, 291 ವರ್ಣ ಚಿತ್ರಗಳೂ ಇವೆ.

– ದತ್ತ, ೭ನೇ ತರಗತಿ.

### ಓಲೆ ಗ್ರಂಥ

– ರಾಧ. ೭ನೇ ತರಗತಿ.

ನಮ್ಮ ಪೂರ್ವಿಕರು ತಾವು ಕಲಿತ ಹಾಡು ಕಥೆ ಇತ್ಯಾದಿ ವಿಷಯಗಳನ್ನು ಬಾಯಿಂದ ಬಾಯಿಗೆ ಹೇಳುತ್ತಾ ಅವುಗಳನ್ನು ಉಳಿಸಿ ಕೊಂಡು ಬಂದರು. ನಂತರ ಬರಹವನ್ನು ಕಲಿಯುವ ಜೊತೆಗೆ ಬರೆಯಲು ಸಾಧನಗಳನ್ನು ಕಂಡುಕೊಂಡರು ಈ ಅನ್ವೇಷಣೆಯಲ್ಲಿ ತಾಳೆ ಗರಿಯು ವಿಶಿಷ್ಟ ಸ್ಥಾನವನ್ನು ಪಡೆದಿದೆ ತಾಳೆ ಗರಿಯಲ್ಲಿ ಅಕ್ಷರಗಳನ್ನು ಕೊರೆದು ಸಿದ್ಧಪಡಿಸಿದ ಪುಸ್ತಕಕ್ಕೆ ಓಲೆ ಗ್ರಂಥ ಎನ್ನುತ್ತಾರೆ. ಒಣಗಿದ ತಾಳೆ ಮರದ ಗರಿಗಳನ್ನು ಹದಗೊಳಿಸಿ ಅವುಗಳ ಮೇಲೆ ಕಬ್ಬಿಣದ ಕಂಠದಿಂದ ಬರೆಯುತ್ತಿದ್ದರು.

ಶ್ರವಣ ಬೆಳಗೊಳದ ಜೈನ ಮಠದಲ್ಲಿ ಹಳೆಯ ಅತಿ ಪುರಾತನ ಓಲೆ ಗ್ರಂಥವಿದೆ. ಈ ಪ್ರತಿಯ ಕಾಲ ಸುಮಾರು 1379

'ರಾಧಾ ನೀನು ಕೆಲವು ಲೇಖನಗಳನ್ನು ಓದಲು ಕಷ್ಟಪಟ್ಟೆ ಏಕೆ'? ಇದು ಶಿಕ್ಷಕಿಯ ಪ್ರಶ್ನೆ. 'ಕೆಲವು ಕಡೆ ಬರೆಹ ಸ್ಪಷ್ಟವಾಗಿಲ್ಲ ಆದ್ದರಿಂದ ಓದಲು ಕಷ್ಟವಾಯಿತು ಮೇಡಂ' ಎಂದು ರಾಧ ಹೇಳಿದಳು. ಬರೆಹ ಚೆನ್ನಾಗಿರಲಿಲ್ಲ ಎಂದರೆ ಅದು ಹೇಗಿತ್ತು? 'ಕೆಲವು ಲೇಖನಗಳಲ್ಲಿ ಕೆಲವು ಅಕ್ಷರಗಳು, ಪದಗಳು ಮತ್ತು ವಾಕ್ಯಗಳು ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ ಮೇಡಂ' ಎಂದಳು.

ನೀನು ಜಾಣೆ ! ಮಕ್ಕಳೇ ಬರೆಹ ಚೆನ್ನಾಗಿರಲಿಲ್ಲ, ಆದರೂ ರಾಧಾ ತಪ್ಪಿಲ್ಲದೆ ಓದಿದಳು ಅದು ಹೇಗೆ ಸಾಧ್ಯವಾಯಿತು? ಇದು ಶಿಕ್ಷಕಿಯ ಮರು ಪ್ರಶ್ನೆ. ಎಲ್ಲರೂ ಒಬ್ಬರನ್ನೊಬ್ಬರು ನೋಡಿದರು, ಗುಸುಗುಸು ಸಪ್ಪಳ ಆರಂಭವಾಯಿತು. ರಾಧಾ ಉತ್ತರಿಸಲು ಮುಂದಾದಳು. ಮೇಡಂ, 'ಒಂದು ಅಕ್ಷರ ತಿಳಿಯದಿದ್ದಾಗ ಅದರ ಹಿಂದಿನ ಅಥವಾ ಮುಂದಿನ ಅಕ್ಷರಗಳ ಸಹಾಯದಿಂದ ತಿಳಿಯದ ಅಕ್ಷರವನ್ನು ಗುರ್ತಿಸಿಕೊಂಡು ಓದಿದೆ. ಅದೇ ರೀತಿ ಒಂದು ಪದ ತಿಳಿಯದಿದ್ದಾಗ ಅದರ ಹಿಂದಿನ ಅಥವಾ ಮುಂದಿನ ಪದಗಳ ಸಹಾಯದಿಂದ ತಿಳಿಯದ ಪದವನ್ನು ಗುರ್ತಿಸಿಕೊಂಡು ಓದಿದೆ. ಇದರಿಂದ ಕಷ್ಟವಾದರೂ ತಪ್ಪಿಲ್ಲದೆ ಓದಲು ಸಾಧ್ಯವಾಯಿತು' ಎಂದಳು.

ಇತರರು ತಮ್ಮ ಅನಿಸಿಕೆಯನ್ನು ಹಂಚಿಕೊಂಡರು. ಎಲ್ಲಮ್ಮನ ಬರೆಹವು ಅವಳ ಮಾತಿನ ರೀತಿಯಲ್ಲೇ ಇರುವ ಬಗ್ಗೆಯೂ ಅಭಿಪ್ರಾಯಗಳು ಬಂದವು. ಶಿಕ್ಷಕಿ ಚರ್ಚೆಯಲ್ಲಿ ಬಂದ ಅಭಿಪ್ರಾಯವನ್ನು ಒಟ್ಟುಗೂಡಿಸಿದರು. ಬರವಣಿಗೆಯು ಚೆನ್ನಾಗಿರಬೇಕಾದರೆ ಅದು ಹೇಗಿರಬೇಕು ಎನ್ನುವ ಬಗ್ಗೆ ತಿಳಿಸುತ್ತಾ....

ತಪ್ಪಿಲ್ಲದೆ ಸ್ಪಷ್ಟವಾಗಿ ಬರೆಯಬೇಕು. ಬರೆದದ್ದು ಅರ್ಥವಾಗುವಂತೆ ಇರಬೇಕು. ಅಕ್ಷರಗಳನ್ನು ಒಂದೇ ಗಾತ್ರದಲ್ಲಿ ಬರೆಯಬೇಕು. ಬರೆಯುವ ಪ್ರತಿ ಅಕ್ಷರವು ಮುದ್ರಿತ ಅಕ್ಷರಗಳ ಆಕಾರದಲ್ಲಿ ಇದ್ದರೆ ಚೆನ್ನ. ಒಂದು ಪದದಲ್ಲಿನ ಅಕ್ಷರಗಳು ಒಂದಕ್ಕೊಂದು ತಾಕದಂತೆ ಹಾಗೂ ಸ್ಥಳ ಬಿಡದಂತೆ ಇರಬೇಕು. ಪದಗಳನ್ನು ಗುರ್ತಿಸಲು ಸಹಾಯವಾಗುವಂತೆ ಪದಗಳ ನಡುವೆ ಸ್ವಲ್ಪ ಸ್ಥಳವನ್ನು ಬಿಟ್ಟು ಬರೆಯಬೇಕು. ಒಂದು ಸಾಲಿನ ಅಕ್ಷರಗಳು ಮತ್ತೊಂದು ಸಾಲಿನ ಅಕ್ಷರಗಳಿಗೆ ತಾಗದಂತೆ ಸಾಲುಗಳ ನಡುವೆ ಸೂಕ್ತ ಸ್ಥಳವನ್ನು ಬಿಟ್ಟು ಬರೆಯಬೇಕು. ಸೂಕ್ತ ಲೇಖನ ಚಿಹ್ನೆಗಳನ್ನು ಬಳಸಬೇಕು. ಅಕ್ಷರ ಹಾಗು ಸಾಲುಗಳು ಓರೆಯಾಗಿರದಿದ್ದರೆ ಒಳಿತು ಎಂದರು. ಈ ರೀತಿಯ ಬರೆಹ ನೋಡಲು ಹಾಗೂ ಓದಲು ಚೆನ್ನ ಅಲ್ಲವೇ?

**ಸಾಮರ್ಥ್ಯ :** ಕೈ ಬರೆಹ ಮತ್ತು ಮುದ್ರಿತ ವಿಷಯಗಳನ್ನು ನಿರರ್ಗಳವಾಗಿ ಓದುವುದು.

**ಆಶಯ :** ಕೈ ಬರೆಹದಲ್ಲಿನ ಲೇಖನಗಳನ್ನು ಓದುವ ಹವ್ಯಾಸ ಬೆಳೆಸುವ ಹಾಗೂ ಸ್ಪಷ್ಟವಾಗಿ ಬರೆಯುವ ಹವ್ಯಾಸವನ್ನು ರೂಢಿಸುವುದು ಇಲ್ಲಿನ ಆಶಯ.

### ಓದಿ ತಿಳಿಯಿರಿ

ಲೇಖನ–ಬರೆವಣಿಗೆ; ನೆರವು–ಸಹಾಯ; ಮನವರಿಕೆ–ಅರ್ಥಮಾಡಿಸುವಿಕೆ; ಯಶ–ಗೆಲುವು; ಹಸ್ತಪ್ರತಿ–ಕೈಬರೆಹದ ಪ್ರತಿ; ಪಂಡಿತ–ವಿದ್ವಾಂಸ; ಪರಿಷ್ಕರಿಸು–ಶುದ್ಧಗೊಳಿಸು; ಪ್ರಕಟ–ಹೊರತರು; ವಾಕ್–ಮಾತು; ಶ್ರವಣ–ಕೇಳುವಿಕೆ; ಕುಂಠಿತ–ನಿಧಾನ; ಉಗ್ಗುವಿಕೆ–ತೊದಲುವಿಕೆ; ಪ್ರಸಿದ್ಧ–ಹೆಸರಾಂತ;

ಜಾನಪದ ತಜ್ಞ–ಜನಪದದಲ್ಲಿ ವಿದ್ವಾಂಸ; ನಿರ್ದೇಶಕ–ಮಾರ್ಗದರ್ಶಕ; ಪ್ರಥಮ–ಮೊದಲ; ಘಟ್ಟ–ಬೆಟ್ಟ; ವೀರ–ಪರಾಕ್ರಮಿ, ಶೂರ; ಅಗ್ರಗಣ್ಯ–ಪ್ರಮುಖರಾದವರು; ರೇಖೆ–ಗೆರೆ; ವರ್ಣ–ಬಣ್ಣ; ಸಂದರ್ಶಿಸು–ಭೇಟಿಮಾಡು;

## ಗಮನಿಸಿ ತಿಳಿಯಿರಿ

ಕಾವ್ಯ, ನಾಟಕ, ಕಾದಂಬರಿ : ಸಾಹಿತ್ಯದ ಪ್ರಕಾರಗಳು/ಬಗೆಗಳು

ಪಂಪ : ಕನ್ನಡದ ಆದಿಕವಿ.

ತಾಳೆಮರ : ಒಂದು ಜಾತಿಯ ಮರ

ಜಲವಿದ್ಯುತ್ ಯೋಜನೆ : ನೀರಿನ ಶಕ್ತಿಯಿಂದ ವಿದ್ಯುತ್ ಉತ್ಪಾದಿಸುವ ಕಾರ್ಯ

ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ : ನಾಟಕ ಕ್ಷೇತ್ರದಲ್ಲಿ ಸಾಧನೆ ಮಾಡಿದವರಿಗೆ ನೀಡುವ ರಾಜ್ಯಮಟ್ಟದ ಗೌರವ ಪ್ರಶಸ್ತಿ

ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ : ಗಣನೀಯ ಸಾಧನೆ ಮಾಡಿದವರಿಗೆ ರಾಜ್ಯೋತ್ಸವ ಸಂದರ್ಭದಲ್ಲಿ ರಾಜ್ಯ ಸರ್ಕಾರ ನೀಡುವ ಗೌರವ ಪ್ರಶಸ್ತಿ

ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ : ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸೇವೆ ಮಾಡಿದವರಿಗೆ ನೀಡುವ ಗೌರವ ಪ್ರಶಸ್ತಿ

ಜ್ಞಾನಪೀಠ ಪ್ರಶಸ್ತಿ : ಸಾಹಿತಿಯೊಬ್ಬರ ಸಮಗ್ರ ಸಾಹಿತ್ಯದ ಸಾಧನೆಗಾಗಿ ರಾಷ್ಟ್ರಮಟ್ಟದಲ್ಲಿ ನೀಡುವ ಶ್ರೇಷ್ಠ ಗೌರವ ಪ್ರಶಸ್ತಿ



## ಪಠ್ಯ ಆಧಾರಿತ ಅಭ್ಯಾಸ

**ಅ) ಒಂದು ಪದ/ವಾಕ್ಯದಲ್ಲಿ ಉತ್ತರಿಸಿರಿ.**

೧. ಕನ್ನಡ ಇಂಗ್ಲಿಷ್ ನಿಘಂಟನ್ನು ರಚಿಸಿದವರು ಯಾರು?

______________________________

೨. ಪಂಪನ ಆದಿಪುರಾಣ ಓಲೆ ಗ್ರಂಥವು ಎಲ್ಲಿದೆ?

______________________________

೩. 'ಗೋಲಗುಂಬಸ್' ಎಂಬ ಹೆಸರು ಏಕೆ ಬಂದಿದೆ?

______________________________

೪. ಮೈಸೂರು ಅರಮನೆಯ ವಾಸ್ತುಶಿಲ್ಪಿಗಳ ಹೆಸರೇನು?

______________________________

**ಆ) ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ಜ್ಞಾನಗಂಗೋತ್ರಿ ವಿಶ್ವಕೋಶದಲ್ಲಿರುವ ಸಂಪುಟಗಳನ್ನು ಹೆಸರಿಸಿ.

______________________________

______________________________

೨. ವಾಕ್ ಶ್ರವಣ ಸಂಸ್ಥೆಯಲ್ಲಿ ಯಾವ ಸಮಸ್ಯೆಗಳಿಗೆ ಚಿಕಿತ್ಸೆ ದೊರೆಯುತ್ತದೆ?

______________________________

______________________________

೩. ವಾಕ್ಯದಲ್ಲಿನ ಒಂದು ಪದ ತಿಳಿಯದಿದ್ದರೆ ಅದನ್ನು ಹೇಗೆ ಅರಿಯಬಹುದು?

______________________________

______________________________

**ಇ) ಕಾರಣ ಕೊಡಿ.**

೧. ಕಾಳಿನದಿ ನೀರಾವರಿಗೆ ಹೆಚ್ಚು ಸಹಕಾರಿಯಾಗಿಲ್ಲ.

______________________________

೨. ರಾಧಾ ಕೆಲವು ಕಡೆ ಓದಲು ಕಷ್ಟಪಟ್ಟಳು.

______________________________

**ಈ) ಲೇಖನದ ಜೊತೆಗೆ ಬರೆದವರ ಹೆಸರನ್ನು ಹೊಂದಿಸಿ ಬರೆಯಿರಿ.**

| ಅ | ಆ | |
|---|---|---|
| ಮೈಸೂರು ಅರಮನೆ | ಎಲ್ಲಮ್ಮ | ________ |
| ಚಂದ್ರಶೇಖರ ಕಂಬಾರ | ದತ್ತ | ________ |
| ಪಿಸುಮಾತಿನ ಗುಂಬಸ್ | ಅಡವಿಯಪ್ಪ | ________ |
| ಜ್ಞಾನ ಗಂಗೋತ್ರಿ | ಅರ್ಜುನ | ________ |
| | ರಾಧ | ________ |

ಉ) ಬಿಟ್ಟ ಸ್ಥಳವನ್ನು ಸೂಕ್ತ ಪದಗಳೊಂದಿಗೆ ಬರೆಯಿರಿ.

೧. ಒಂದು ಪದದಲ್ಲಿನ ಅಕ್ಷರಗಳು ಒಂದಕ್ಕೊಂದು ________ ಹಾಗೂ ಸ್ಥಳ ________ ಇರಬೇಕು.

೨. ಶುದ್ಧ ಬರೆಹ ________ ಮತ್ತು ________ ಚೆನ್ನ.

೩. ಬರೆಹದಲ್ಲಿ ಸೂಕ್ತ ಲೇಖನ ________ ಬಳಸಬೇಕು.

೪. ಪದಗಳ ನಡುವೆ ಸ್ವಲ್ಪ ________ ಬಿಟ್ಟು ಬರೆಯಬೇಕು.

## ಸಾಮರ್ಥ್ಯ ಆಧಾರಿತ ಅಭ್ಯಾಸ

ಅ) ಈ ಕೆಳಗೆ ಕೊಟ್ಟಿರುವ ವಾಕ್ಯವನ್ನು ಸರಿಯಾದ ಕ್ರಮದಲ್ಲಿ ಬರೆದಿಲ್ಲ. ಪ್ರತಿ ವಾಕ್ಯವನ್ನು ಓದಿ ಸರಿಪಡಿಸಿ ಬರೆಯಿರಿ.

೧) ಕವಿಗಳ ಕನ್ನಡ ಬೀಡು ನಾಡು ________________

೨) ನಾಡು ಶ್ರೀಗಂಧದ ಕನ್ನಡ ನಾಡು ________________

೩) ತವರೂರು ಕನ್ನಡನಾಡು ಲಲಿತಕಲೆಗಳ ________________

೪) ಶಿಲ್ಪಗಳ ತಾಣ ಕನ್ನಡ ನಾಡು ವಾಸ್ತು ________________



ಆ) ಇಲ್ಲಿ ಕೊಟ್ಟಿರುವ ವಾಕ್ಯಗಳನ್ನು ಗಮನಿಸಿ. ಅದೇ ರೀತಿಯಲ್ಲಿ ಬರೆಯಲು ಪ್ರಯತ್ನಿಸಿ.

ಶಾಲೆಯಲ್ಲಿ ಕಲಿಯುವುದು ಮಕ್ಕಳ ಹಕ್ಕು ________________

ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು. ________________

ಗುರು ಹಿರಿಯರನ್ನು ಗೌರವಿಸಬೇಕು. ________________

ಇ) ಇಲ್ಲಿ ಕೊಟ್ಟಿರುವ ವಾಕ್ಯವನ್ನು ಖಾಲಿ ಮನೆಯಲ್ಲಿ ನಿಮ್ಮ ಇಬ್ಬರು ಸ್ನೇಹಿತರಿಂದ ಬರೆಸಿರಿ.

"ಕನ್ನಡ ನಾಡು ಹಲವು ಕವಿಗಳ ಬೀಡು."

| ಗೆಳೆಯನ ಹೆಸರು ೧ : | |
|---|---|
| ಗೆಳತಿಯ ಹೆಸರು ೨ : | |

ಸ್ನೇಹಿತರ ಬರೆಹದಲ್ಲಿ ಯಾರ ಬರೆಹ ಚೆನ್ನಾಗಿದೆ?

________________________________

ಬರೆಹ ಚೆನ್ನಾಗಿದೆ ಎನ್ನಲು ಕಾರಣವೇನು?

________________________________

ಸ್ನೇಹಿತರ ಬರೆಹದಲ್ಲಿ ಯಾರ ಬರೆಹ ಚೆನ್ನಾಗಿಲ್ಲ ?

_______________________________________________

ಬರೆಹ ಚೆನ್ನಾಗಿಲ್ಲ ಎನ್ನಲು ಕಾರಣವೇನು?

_______________________________________________

## ಭಾಷಾ ಚಟುವಟಿಕೆ

**ಅ) ಕೊಟ್ಟಿರುವ ಪದಗಳನ್ನು ಓದಿ, ಧ್ವನಿ ಮತ್ತು ಅರ್ಥ ವ್ಯತ್ಯಾಸ ತಿಳಿಯಿರಿ.**

ಅಕ್ಕಿ – ಹಕ್ಕಿ, ಅನ್ನ – ಅಣ್ಣ, ಉಳಿ – ಹುಳಿ, ಅಲೆ – ಅಳೆ, ಒಡೆ – ವಡೆ,

**ಆ) ಕೊಟ್ಟಿರುವ ಪದಗಳನ್ನು ಓದಿ, ಧ್ವನಿ ಮತ್ತು ಅರ್ಥ ವ್ಯತ್ಯಾಸ ತಿಳಿಯಿರಿ.**

ದನ – ಧನ, ಬಾನು – ಭಾನು, ಪಲ – ಫಲ,

**ಇ) ಕೊಟ್ಟಿರುವ ಪದಗಳಲ್ಲಿ ಅಕ್ಷರ ದೋಷ ಗುರ್ತಿಸಿ ಸರಿಪಡಿಸಿ ಬರೆಯಿರಿ.**

ಬವ್ಯ : ________, ಮಟ : ________ ಗ್ರಂತ: ________,



**ಕುವೆಂಪುರವರ ಹಸ್ತಾಕ್ಷರವನ್ನು ಓದಿ ನಿಮ್ಮ ಕೈಬರಹದಲ್ಲಿ ಬರೆಯಿರಿ.**



# ಗದ್ಯಪಾಠ – ೪

## ಮಿತ್ರರ ಸಮಾಗಮ

**ಪ್ರವೇಶಕ್ಕೆ ಮುನ್ನ :** ಮಕ್ಕಳೇ, ನಿಮಗೆ ಸ್ನೇಹಿತರಿದ್ದಾರಲ್ಲವೇ? ಸ್ನೇಹಕ್ಕೆ ಮಿಗಿಲಾದ ಸಂಬಂಧವಿಲ್ಲ, ಅದಕ್ಕೆ ಅಂತಸ್ತಿನ ಹಂಗಿಲ್ಲ, ಅಗಲಿದರೂ ಸ್ನೇಹದ ಸೆಳೆತ ಮರೆಯಲಾಗದು. ಅಗಲಿಕೆಯ ನಂತರ ಮತ್ತೆ ಗೆಳೆಯರಿಬ್ಬರು ಒಂದಾದ ಸ್ವಾರಸ್ಯ ಘಟನೆಯನ್ನು ಈ ಕಥೆಯಿಂದ ತಿಳಿಯೋಣ.

ಅಕ್ಬರ್ ಬೀರಬಲ್ ದೊರೆ ಮಂತ್ರಿಯಾಗಿದ್ದಂತೆ ಆತ್ಮೀಯ ಮಿತ್ರರೂ ಆಗಿದ್ದರು. ಒಮ್ಮೆ ಅಕ್ಬರ್ ಮಹಾಶಯನಿಗೆ ಬೀರಬಲ್ಲನ ಮೇಲೆ ಯಾವುದೋ ಕಾರಣಕ್ಕೆ ಅಸಮಾಧಾನ ಉಂಟಾಯಿತು.

"ನಿನ್ನ ಮುಖವನ್ನು ತೋರಿಸಬೇಡ, ಎಲ್ಲಿಗಾದರೂ ಹೊರಟು ಹೋಗು" ಎಂದು ಬೀರಬಲ್‌ಗೆ ಆದೇಶಿಸಿದ. ಅಂದಿನಿಂದ ಬೀರಬಲ್ ಯಾರಿಗೂ ಕಾಣದಂತೆ ಮರೆಯಾದ.




ಕೆಲ ದಿನಗಳ ನಂತರ ಅಕ್ಬರನಿಗೆ ಬೀರಬಲ್ಲನನ್ನು ಕಾಣುವ ತವಕ ಉಂಟಾಯಿತು. ಅವನಿಗಾಗಿ ಹುಡುಕಾಡಿಸಿದ. ಬೀರಬಲ್ ಎಲ್ಲಿಯೂ ಸಿಗಲಿಲ್ಲ. "ಎಂಥ ಕೆಲಸ ಆಗಿಹೋಯಿತು." ಎಂದು ಅಕ್ಬರ್ ಚಿಂತಿಸತೊಡಗಿದ.

ಒಮ್ಮೆ ಅಕ್ಬರ್ ದರ್ಬಾರ್ ನಡೆಸುತ್ತಿರುವಾಗ ಸೇವಕನೊಬ್ಬ ಒಳಬಂದು "ಪ್ರಭು! ಅರಮನೆಯ ದ್ವಾರದಲ್ಲಿ ಒಬ್ಬ ಸಾಧು ಬಂದಿದ್ದಾರೆ. ಅವರ ಶಿಷ್ಯರು ಆ ಸಾಧು ವಿಶ್ವದಲ್ಲಿಯೇ ದೊಡ್ಡ ಮೇಧಾವಿ

ಹಾಗೂ ತುಂಬಾ ಬುದ್ಧಿವಂತರೆಂದು ಹೇಳುತ್ತಿದ್ದಾರೆ" ಎಂದು ಹೇಳಿದ. ಅಕ್ಬರ್ ತಕ್ಷಣವೇ ಆ ಸಾಧುವನ್ನು ಬರಮಾಡಿಕೊಂಡ.

ಅರಮನೆಯನ್ನು ಪ್ರವೇಶಿಸಿದ ಸಾಧು ತುಂಬಾ ತೇಜಸ್ವಿಯಾಗಿದ್ದ. ಅದೇ ಅವನೊಬ್ಬ ಬುದ್ಧಿವಂತನೆಂಬುದನ್ನು ಸಾರುತ್ತಿತ್ತು.

ಸಾಧು ! ನೀನು ಬಹಳ ಬುದ್ಧಿವಂತನೆಂದು ಕೇಳಿದೆ. ನಿನ್ನನ್ನು ಪರೀಕ್ಷಿಸುವ ಸಲುವಾಗಿ ಆಸ್ಥಾನದ ಪಂಡಿತರು ನಿನಗೆ ಪ್ರಶ್ನೆಗಳನ್ನು ಕೇಳಲು ಹೇಳುತ್ತೇನೆ. ಸರಿಯಾಗಿ ಉತ್ತರಿಸಿದರೆ ಅಮೂಲ್ಯವಾದ ಉಡುಗೊರೆಗಳನ್ನು ನೀಡುತ್ತೇನೆ. ಇಲ್ಲವಾದರೆ ಶಿಕ್ಷೆಗೆ ಗುರಿಯಾಗುತ್ತೀಯೆ ಎಚ್ಚರ!" ಎಂದನು ಅಕ್ಬರ್. ಆ ಮಾತಿಗೆ ಆಗಬಹುದು ಎಂದ ಸಾಧು.

ಅಕ್ಬರನ ಆಸ್ಥಾನದಲ್ಲಿ ತಾನ್‌ಸೇನ್, ತೋದರಮಲ್ಲ, ಅಬುಲ್ ಫಸಲ್, ಫೈಜಿ ಮೊದಲಾದ ವಿದ್ವಾಂಸರಿದ್ದರು. ಅವರು ಪ್ರಶ್ನಿಸತೊಡಗಿದರು. ಮೊದಲಿಗೆ...

**ಅಬುಲ್ ಫಸಲ್** : ಕಳೆದುಹೋದುದನ್ನು ಮತ್ತೆ ಪಡೆಯಲಾಗದ್ದು ಯಾವುದು?

**ಸಾಧು** : ಜೀವ, ಅವಕಾಶ, ಸಮಯ.

**ತೋದರಮಲ್ಲ** : ಜಗತ್ತಿನಲ್ಲಿ ಅತ್ಯುತ್ತಮನಾದ ಸ್ನೇಹಿತನಾರು?

**ಸಾಧು** : ಯುಕ್ತಾಯುಕ್ತ ಪರಿಜ್ಞಾನ, ವ್ಯಕ್ತಿಯ ಮುಂದಾಲೋಚನೆ.

**ಫೈಜಿ** : ವಿಶ್ವದಲ್ಲಿ ಅತ್ಯುತ್ತಮವಾದ ವಸ್ತು ಯಾವುದು?

**ಸಾಧು** : ಜ್ಞಾನ

(ವಿದ್ವಾಂಸರು ಕೇಳಿದ ಪ್ರಶ್ನೆಗಳಿಗೆ ಸಾಧು ಸರಾಗವಾಗಿ ಉತ್ತರಿಸುತ್ತಿದ್ದ)

**ಮಾನ್‌ಸಿಂಗ್** : ಒಬ್ಬ ವ್ಯಕ್ತಿಯ ಅತ್ಯುತ್ತಮವಾದ ಸಾಮರ್ಥ್ಯ ಯಾವುದು? ಮಾರುತಕ್ಕಿಂತ ವೇಗವಾದುದು ಯಾವುದು? ಅತ್ಯಂತ ಸಿಹಿಯಾದುದು ಯಾವುದು? ಎಂದು ಪ್ರಶ್ನೆಗಳ ಸುರಿಮಳೆಗರೆದ.

**ಸಾಧು** : ವ್ಯಕ್ತಿಯ ಅತ್ಯುತ್ತಮ ಸಾಮರ್ಥ್ಯ ಆತನ ಧೈರ್ಯ; ಮಾರುತಕ್ಕಿಂತ ವೇಗವಾದುದು ಮನುಷ್ಯನ ಕಲ್ಪನೆ; ಅತ್ಯಂತ ಸಿಹಿಯಾದದ್ದು ಮಗುವಿನ ನಗು.

**ತಾನ್‌ಸೇನ್** : ಸಂಗೀತದಲ್ಲಿ ಅವಿನಾಶಿ ಯಾವುದು?

**ಸಾಧು** : ಸ್ವರಗಳು.

ವಿದ್ವಾಂಸರೆಲ್ಲರು ಸಾಧುವಿನ ಬುದ್ಧಿವಂತಿಕೆಯನ್ನು ಮೆಚ್ಚಿಕೊಂಡರು. ಅನಂತರ ಅಕ್ಬರನೇ ಪ್ರಶ್ನಿಸತೊಡಗಿದ....

**ಅಕ್ಬರ್** : ರಾಜ್ಯಭಾರ ನಡೆಸುವಲ್ಲಿ ನೆರವಾಗುವ ಅತ್ಯಂತ ಮುಖ್ಯವಾದ ಅಂಶ ಯಾವುದು?

**ಸಾಧು** : ಕೌಶಲ.

**ಅಕ್ಬರ್** : ರಾಜನ ದೊಡ್ಡ ಶತ್ರು ಯಾರು?

**ಸಾಧು** : ಸ್ವಾರ್ಥ.





ಅಕ್ಬರ್ ಚಕ್ರವರ್ತಿ ಸಾಧುವಿನ ಉತ್ತರದಿಂದ ಸಂತಸಪಟ್ಟ. ಅವನಿಗೆ ತನ್ನ ಆಸ್ಥಾನದಲ್ಲಿ ಒಂದು ಸ್ಥಾನವನ್ನು ಕೊಡುವುದಾಗಿ ಹೇಳಿದ. “ಅಯ್ಯಾ ! ಸಾಧುಗಳಿಗೆ ವಿಶೇಷ ಶಕ್ತಿಗಳಿರುತ್ತವೆ ಎಂದು ಕೇಳಿದ್ದೇನೆ. ನಿನಗೆ ಅಂಥ ಯಾವುದಾದರೂ ಶಕ್ತಿ ಇದೆಯೇ?” ಎಂದು ಪ್ರಶ್ನಿಸಿದ ಅಕ್ಬರ್. “ಹೌದು! ತಾವು ಯಾರನ್ನಾದರೂ ನೋಡುವ ಇಚ್ಛೆ ಇದ್ದರೆ ಅವರನ್ನು ನಿಮ್ಮ ಕಣ್ಮುಂದೆ ಕ್ಷಣಮಾತ್ರದಲ್ಲಿ ತಂದು ನಿಲ್ಲಿಸಬಲ್ಲೆ” ಎಂದ ಸಾಧು. ಹಾಗಿದ್ದರೆ “ನನ್ನ ಮಂತ್ರಿ ಬೀರಬಲ್ ಕಾಣೆಯಾಗಿದ್ದಾನೆ. ಅವನನ್ನು ಕರೆದು ತಾ ನೋಡೋಣ” ಎಂದ ಅಕ್ಬರ್.

ಸಾಧು ನಿಧಾನವಾಗಿ ತನ್ನ ಗಡ್ಡ ಮೀಸೆಗಳನ್ನು ಕಳಚಿದ. ಎದುರಿಗೆ ಬೀರಬಲ್ ನಿಂತಿದ್ದ. ಸಾಧುವಿನ ವೇಷದಲ್ಲಿ ಬಂದಿದ್ದವನು ಅವನೇ. ಅಕ್ಬರನಿಗೆ ಸಂತೋಷವಾಯಿತು. ನಿನ್ನ ಉತ್ತರಗಳಿಂದಲೇ ನಿನ್ನನ್ನು ಬೀರಬಲ್ ಎಂದು ಗುರುತಿಸಿದ್ದೆ. ಅದಕ್ಕೆ ಈ ಪ್ರಶ್ನೆ ಹಾಕಿದೆ. ಇನ್ನೆಂದೂ ನನ್ನ ಬಿಟ್ಟು ಹೋಗಬೇಡ” ಎಂದು ಮಿತ್ರನನ್ನು ಆತ್ಮೀಯತೆಯಿಂದ ಅಪ್ಪಿಕೊಂಡನು.

> ಗೆಳೆತನವೆ ಇಹಲೋಕಕಿರುವ ಅಮೃತ. ಗೆಳೆತನವೆ ಚಿರಬಾಳ ಸಂಜೀವಿನಿ.

**ಸಾಮರ್ಥ್ಯ:** ಉಕ್ತಲೇಖನದ ಮೂಲಕ ಸೂಕ್ತ ಲೇಖನ ಚಿಹ್ನೆಗಳನ್ನು ಬಳಸಿ ವಾಕ್ಯಗಳನ್ನು ಬರೆಯುವುದು.

**ಆಶಯ :** ಅಕ್ಬರ್-ಬೀರಬಲ್ ಆತ್ಮೀಯ ಮಿತ್ರರಾಗಿದ್ದರು. ಇವರು ಜನಸಾಮಾನ್ಯರಿಗೆ ಹೆಚ್ಚು ಪರಿಚಿತವಾಗಿರುವುದು ತಮ್ಮ ಹಾಸ್ಯಮಯ ಘಟನೆಗಳಿಂದ. ಇವರ ಸ್ವಾರಸ್ಯಕರ ಕೌತುಕದ ಪ್ರಸಂಗಗಳು ಜನಜನಿತವಾಗಿದ್ದು ಅಕ್ಬರ್-ಬೀರಬಲ್ಲರನ್ನು ಜನತೆಯ ಹತ್ತಿರಕ್ಕೆ ತಂದಿವೆ. ಇಂತಹ ಒಂದು ಕೌತುಕ ಪ್ರಸಂಗವನ್ನು ಪರಿಚಯಿಸುವುದು ಈ ಕಥೆಯ ಆಶಯ.

## ಓದಿ ತಿಳಿಯಿರಿ

ಮಿತ್ರ – ಸ್ನೇಹಿತ, ಗೆಳೆಯ; ಅಸಮಾಧಾನ – ಬೇಸರ. ಅತೃಪ್ತಿ; ಆಜ್ಞೆ – ಅಪ್ಪಣೆ; ತವಕ– ಆತುರ, ಕಾತರ; ದ್ವಾರ – ಬಾಗಿಲು; ತೇಜಸ್ವಿ – ತೇಜಸ್ಸುಳ್ಳವನು, ಕಾಂತಿಯುಳ್ಳವನು; ಮಾರುತ – ಗಾಳಿ; ಅವಿನಾಶಿ – ನಾಶವಿಲ್ಲದ್ದು; ಕೌಶಲ – ಜಾಣತನ; ಸ್ವಾರ್ಥ – ಸ್ವಹಿತ, ಸ್ವಪ್ರಯೋಜನ; ರಾಜ್ಯಭಾರ – ರಾಜ್ಯದ ಹೊಣೆಗಾರಿಕೆ, ಆಳ್ವಿಕೆ; ಆಲಂಗಿಸು – ಅಪ್ಪಿಕೊಳ್ಳು, ದರ್ಬಾರು –ರಾಜರ ಆಸ್ಥಾನ, ಅಧಿಕಾರ ನಡೆಸುವಿಕೆ.

## ಗಮನಿಸಿ ತಿಳಿಯಿರಿ

ಅಕ್ಬರ್ – ಮೊಗಲ್ ವಂಶದ ಪ್ರಸಿದ್ಧ ದೊರೆ

ಬೀರಬಲ್ಲ – ಅಕ್ಬರನ ಆಪ್ತ ಮಂತ್ರಿಗಳಲ್ಲಿ ಒಬ್ಬ.



## ಪಠ್ಯ ಆಧಾರಿತ ಅಭ್ಯಾಸ

**ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧) ಅಕ್ಬರ್ ಬೀರಬಲ್ಲನಿಗೆ ಏನೆಂದು ಆಜ್ಞೆ ಮಾಡಿದ?

______________________________

೨) ಅರಮನೆಯನ್ನು ಪ್ರವೇಶಿಸಿದ ಸಾಧು ಹೇಗಿದ್ದ?

______________________________

೩) ಅಕ್ಬರನ ಆಸ್ಥಾನದಲ್ಲಿ ಯಾರು ಯಾರು ಇದ್ದರು?

______________________________

೪) ವಿಶ್ವದಲ್ಲಿ ಅತ್ಯುತ್ತಮವಾದ ವಸ್ತು ಯಾವುದು?

______________________________

## ಆ) ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ.

೧) ಸೇವಕ ಅಕ್ಬರನಲ್ಲಿಗೆ ಬಂದು ಏನೆಂದು ನಿವೇದಿಸಿದ?

______________________________

______________________________

______________________________

೨) ಅರಮನೆಯನ್ನು ಪ್ರವೇಶಿಸಿದ ಸಾಧುವಿಗೆ ಅಕ್ಬರ್ ಏನೆಂದು ಹೇಳಿದ?

______________________________

______________________________

______________________________

೩) ಮಾನ್‌ಸಿಂಗ್‌ನ ಪ್ರಶ್ನೆಗಳಿಗೆ ಸಾಧುವಿನ ಉತ್ತರಗಳೇನು?

______________________________

______________________________

______________________________

೪) ಸಾಧುವಿನ ಉತ್ತರಗಳಿಂದ ಸಂತಸಪಟ್ಟ ಅಕ್ಬರ್ ಏನು ಹೇಳಿದ?

______________________________

______________________________

______________________________



## ಇ) ಈ ಕೆಳಗಿನ ವಾಕ್ಯಗಳನ್ನು ಯಾರು / ಯಾರಿಗೆ ಹೇಳಿದರು.

೧) "ನಿನ್ನ ಮುಖವನ್ನು ತೋರಿಸಬೇಡ, ಎಲ್ಲಿಗಾದರೂ ಹೊರಟುಹೋಗು"

______________________________

೨) "ಕಳೆದು ಹೋದದ್ದನ್ನು ಮತ್ತೆ ಪಡೆಯಲಾಗದ್ದು ಯಾವುದು"?

______________________________

೩) "ನನ್ನ ಮಂತ್ರಿ ಬೀರಬಲ್ ಕಾಣೆಯಾಗಿದ್ದಾನೆ", ಅವನನ್ನು ಕರೆದು ತಾ ನೋಡೋಣ.

______________________________

**ಈ) ಆವರಣದಲ್ಲಿ ಕೊಟ್ಟಿರುವ ಪದಗಳಲ್ಲಿ ಸೂಕ್ತವಾದುದನ್ನು ಆಯ್ದು ಖಾಲಿ ಬಿಟ್ಟಿರುವ ಸ್ಥಾನವನ್ನು ಭರ್ತಿಮಾಡಿ.**

೧) ಒಂದು ದಿನ ಅಕ್ಬರ್ ____________ ನಡೆಸುತ್ತಿರುವಾಗ ಒಬ್ಬ ಸೇವಕ ಒಳಬಂದ.
(ಸಭೆ, ದರ್ಬಾರ್, ತರಗತಿ, ಗೋಷ್ಠಿ)

೨) ಎಲ್ಲ ಆಸ್ಥಾನಿಕರು ____________ ಬುದ್ಧಿವಂತಿಕೆಯನ್ನು ಮೆಚ್ಚಿಕೊಂಡರು.
(ಅಕ್ಬರನ, ತಾನಸೇನನ, ಸಾಧುವಿನ, ಫೈಜಿಯ)

೩) ಬೀರಬಲ್ಲ ನಿನ್ನ ____________ ಗಳಿಂದಲೇ ನಾನು ನಿನ್ನನ್ನು ಗುರುತಿಸಿದ್ದೆ.
(ಲಕ್ಷಣ, ಉತ್ತರ, ಶಕ್ತಿ, ವೇಷ)

**ಉ) ಕ್ರಮವಾಗಿ ಹೊಂದಿಸಿ ಬರೆಯಿರಿ.**

| ಅ | | ಆ | |
|---|---|---|---|
| ೧) ಅಕ್ಬರ್ | – | ಅಸಾಮರ್ಥ್ಯ | ____________ |
| ೨) ಮೇಧಾವಿ | – | ಸ್ವಾರ್ಥ | ____________ |
| ೩) ಸಾಧು | – | ಬುದ್ಧಿವಂತ | ____________ |
| ೪) ರಾಜನ ಶತ್ರು | – | ಬೀರಬಲ್ಲ | ____________ |
| ೫) ಸಾಮರ್ಥ್ಯ | – | ಮಂತ್ರಿ | ____________ |
| | | ಚಕ್ರವರ್ತಿ | ____________ |



## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ) ಆಯಾ ಲೇಖನ ಚಿಹ್ನೆಗೆ ತಕ್ಕ ವಿವರವನ್ನು ಹೊಂದಿಸಿ ಬರೆಯಿರಿ.**

| ಅ | | | ಆ |
|---|---|---|---|
| ೧) ಪೂರ್ಣವಿರಾಮ | . | – | ಅಚ್ಚರಿ, ಖೇದ, ಸಂತೋಷ, ವಿಷಾದ ಇತ್ಯಾದಿ ಭಾವಗಳನ್ನು ಸೂಚಿಸಲು ಬಳಸಲಾಗುತ್ತದೆ. |
| ೨) ಅಲ್ಪವಿರಾಮ | , | – | ಪ್ರಶ್ನೆಯನ್ನು ಸೂಚಿಸಲು ಬಳಸಲಾಗುತ್ತದೆ. |
| ೩) ಅರ್ಧವಿರಾಮ | ; | – | ಪರ್ಯಾಯ ಅಥವಾ ಹೆಚ್ಚಿನ ವಿವರಗಳನ್ನು ತಿಳಿಸುವಾಗ ಬಳಸಲಾಗುತ್ತದೆ. |

೪) ಭಾವಸೂಚಕ ! – ಒಂದು ಅಭಿಪ್ರಾಯದ ವಿವರಣೆ ಮುಂದಿನಂತೆ ಇದೆ ಎಂಬುದನ್ನು ತೋರಿಸುವಾಗ ಬಳಸಲಾಗುತ್ತದೆ.

೫) ಪ್ರಶ್ನಾರ್ಥಕ ? – ವಾಕ್ಯಗಳಲ್ಲಿ ಉಪವಾಕ್ಯದ ಕೊನೆಯಲ್ಲಿ ಬಳಸುವ ಚಿಹ್ನೆ.

೬) ಉದ್ಧರಣ " " – ಪೂರ್ಣವಾಕ್ಯದ ಕೊನೆಯಲ್ಲಿ ಬಳಸಲಾಗುತ್ತದೆ.

೭) ವಿವರಣ :– – ವಾಕ್ಯದ ಮುಂದುವರಿಕೆಯನ್ನು ತಿಳಿಸುತ್ತದೆ.

೮) ಆವರಣ ( ) – ಹೇಳಿಕೆಗಳಿಗೆ ಬಳಸಲಾಗುತ್ತದೆ.

**ಆ) ಈ ಕೆಳಗಿನ ವಾಕ್ಯಗಳಿಗೆ ಲೇಖನ ಚಿಹ್ನೆಗಳನ್ನು ಬಳಸಿರಿ.**

೧) ಕುವೆಂಪು ಬೇಂದ್ರೆ ಕಾರಂತ ಮಾಸ್ತಿ ವಿನಾಯಕ ಅನಂತಮೂರ್ತಿ ಕಾರ್ನಾಡ ಕಂಬಾರ ಕನ್ನಡದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು

೨) ಬಸವಣ್ಣನವರು ದಯವೇ ಧರ್ಮದ ಮೂಲ ಎಂದು ಹೇಳಿದರು

೩) ಪಂಪ ಯಾವ ಶತಮಾನದ ಕವಿ

೪) ಅಯ್ಯೊ ವಿಧಿಬರಹವನ್ನು ಯಾರೂ ಅಳಿಸಲಾರರು



## ಭಾಷಾಭ್ಯಾಸ

**ಅ) ಈ ಕೆಳಗಿನ ವಾಕ್ಯಗಳಲ್ಲಿ ಕ್ರಿಯಾಪದಗಳ ಕೆಳಗೆ ಗೆರೆ ಹಾಕಿ ಗುರುತಿಸಿ.**

**ಗಮನಿಸಿ** : ಕ್ರಿಯೆಯನ್ನು ಸೂಚಿಸುವ ಪದಗಳಿಗೆ ಕ್ರಿಯಾಪದಗಳೆಂದು ಹೆಸರು.

ಮೀನು ನೀರಿನಲ್ಲಿ ಈಜುತ್ತದೆ.

ಸಂಗೀತ ಚೆನ್ನಾಗಿ ಹಾಡುವಳು.

ಮಗು ಸಂತೋಷದಿಂದ ನಕ್ಕಿತು.

**ಆ) ಈ ಕೆಳಗಿನ ಪದಗಳಲ್ಲಿ ಕ್ರಿಯಾ ಪದಗಳನ್ನು ಆಯ್ದು ಬರೆಯಿರಿ.**

ಚಲಿಸಿದಳು, ಅಂದವಾದ, ಓದಿದನು, ಚಿತ್ರವನ್ನು, ಕಲಿಯುತ್ತಾನೆ, ಕೂಗುವುದು,

---

**ಗಮನಿಸಿ ತಿಳಿಯಿರಿ :** ಹಿಂದೆ ನಡೆದು ಹೋದ ಸಂಗತಿಯನ್ನು ಹೇಳುವುದು ಭೂತಕಾಲ. ಸದ್ಯ ನಡೆಯುತ್ತಿರುವ ಸಂಗತಿಯನ್ನು ಹೇಳುವುದು ವರ್ತಮಾನಕಾಲ. ಮುಂದೆ ನಡೆಯಲಿರುವುದನ್ನು ತಿಳಿಸುವುದು ಭವಿಷ್ಯತ್ ಕಾಲ.

**ಇ) ಕೆಳಗಿನ ವಾಕ್ಯಗಳನ್ನು ಓದಿ. ಇವು ಯಾವ ಕಾಲ ಸೂಚಿಸುತ್ತವೆ ಎಂಬುದನ್ನು ತಿಳಿಸಿ.**

೧. ಪ್ರಣವನು ಕಂಪ್ಯೂಟರನ್ನು ಕಲಿಯುತ್ತಿದ್ದಾನೆ. : ______________

೨. ಅಭಿನಂದನ ಶಾಲೆಗೆ ಹೋದನು. : ______________

೩. ಸನ್ನಿಧಿ ನಾಳೆಯಿಂದ ಟೆನಿಸ್ ತರಬೇತಿಗೆ ಹೋಗುವಳು. : ______________

## ಭಾಷಾ ಚಟುವಟಿಕೆ

**ಅ) ಈ ಕೆಳಗಿನ ವಾಕ್ಯಗಳನ್ನು ಪ್ರಶ್ನಾರ್ಥಕ ವಾಕ್ಯಗಳನ್ನಾಗಿ ಪರಿವರ್ತಿಸಿ.**

೧. ಅಕ್ಬರನಿಗೆ ಬೀರಬಲ್ಲನ ಮೇಲೆ ಅಸಮಾಧಾನ ಉಂಟಾಯಿತು.

______________________________

೨. ಅಕ್ಬರ್ ಬೀರಬಲ್ಲನಿಗಾಗಿ ಹುಡುಕಾಡಿಸಿದ.

______________________________

೩. ಸಾಧುವಿನ ವೇಷದಲ್ಲಿ ಬಂದಿದ್ದವನು ಬೀರಬಲ್ಲನೇ ಆಗಿದ್ದ.

______________________________



## ಚಟುವಟಿಕೆ

೧. ಕರ್ಣ–ದುರ್ಯೋಧನ, ಕೃಷ್ಣ–ಕುಚೇಲ ಮೊದಲಾದವರ ಕಥೆಗಳನ್ನು ಓದಿ ಆತ್ಮೀಯ ಸ್ನೇಹದ ಮಹತ್ವವನ್ನು ತಿಳಿಯಿರಿ.

೨. ಪಂಚತಂತ್ರದ ಕಥೆಗಳನ್ನು ಓದಿ.

# ಪದ್ಯಪಾಠ – ೫

## ಶ್ರಾವಣಾ ಬಂತು ಕಾಡಿಗೆ

**ಪ್ರವೇಶಕ್ಕೆ ಮುನ್ನ :** ಮಕ್ಕಳೇ ಬೇರೆ ಬೇರೆ ಋತುಮಾನಗಳಲ್ಲಿ ನಿಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಏನೇನು ಬದಲಾವಣೆಯಾಗುತ್ತದೆ ಗಮನಿಸಿದ್ದೀರಾ? ಮಳೆಗಾಲದೊಂದಿಗೆ ಆಗಮಿಸುವ ಶ್ರಾವಣ ಮಾಸದಲ್ಲಿ ಭೂಮಿ, ಆಕಾಶ, ಮನೆ, ಮನಸ್ಸುಗಳ ಮೇಲೆ ಪ್ರಕೃತಿ ಮಾಡುವ ಮಾಂತ್ರಿಕ ಪರಿಣಾಮವನ್ನು ಬೇಂದ್ರೆಯವರ ಈ ಪದ್ಯದ ಮೂಲಕ ಅರಿಯೋಣವೆ?

ಶ್ರಾವಣಾ ಬಂತು ಕಾಡಿಗೆ । ಬಂತು ನಾಡಿಗೆ ।
ಬಂತು ಬೀಡಿಗೆ । ಶ್ರಾವಣಾ ಬಂತು ॥ ಪಲ್ಲವಿ ॥

ಕಡಲಿಗೆ ಬಂತು ಶ್ರಾವಣಾ । ಕುಣಿದ್ಹಾಂಗ ರಾವಣಾ ।
ಕುಣಿದಾವ ಗಾಳಿ । ಭೈರವನ ರೂಪತಾಳಿ ॥ ಅನುಪಲ್ಲವಿ ॥

ಶ್ರಾವಣಾ ಬಂತು ಘಟ್ಟಕ್ಕ । ರಾಜ್ಯಪಟ್ಟಕ್ಕ ।
ಬಾನಮಟ್ಟಕ್ಕ ।
ಏರ್‍ಯಾವ ಮುಗಿಲು । ರವಿ ಕಾಣೆ ಹಾಡೆಹಗಲು

ಶ್ರಾವಣಾ ಬಂತು ಹೊಳಿಗಳಿಗೆ । ಅದೇ ಶುಭಗಳಿಗೆ ।
ಹೊಳಿಗೆ ಮತ್ತ ಮಳಿಗೆ ।
ಆಗ್ಯೇದ ಲಗ್ನ । ಅದರಾಗ ಭೂಮಿ ಮಗ್ನ ॥

ಶ್ರಾವಣಾ ಬಂತು ಊರಿಗೆ । ಕೇರಿ ಕೇರಿಗೆ ।
ಹೊಡೆದ ಝೂರಿಗೆ ।
ಜೋಕಾಲಿ ಏರಿ । ಅಡರ್‍ಯಾವ ಮರಕ ಹಾರಿ ॥

ಶ್ರಾವಣಾ ಬಂತು ಮನಿಮನಿಗೆ । ಕೂಡಿ ದನಿದನಿಗೆ
ಮನದ ನನಿಕೊನಿಗೆ ।
ಒಡೆದಾವ ಹಾಡೂ । ರಸ ಉಕ್ಕತಾವ ನೋಡು ॥
ಶ್ರಾವಣಾ ಬಂತು.

–ದ.ರಾ. ಬೇಂದ್ರೆ

**ಸಾಮರ್ಥ್ಯ: ಸನ್ನಿವೇಶ ಮತ್ತು ಘಟನೆಗಳನ್ನು ವಿವರಿಸುವುದು.**

**ಆಶಯ :** ಮನುಷ್ಯ ಪ್ರಕೃತಿಯ ಕೂಸು. ಆದರೆ ಆಧುನಿಕ ಧಾವಂತದ ಬದುಕಿನ ಅವಸರದಲ್ಲಿ ಪ್ರಕೃತಿಯ ಸಹಜ ವಿದ್ಯಮಾನಗಳಿಂದ ದೂರ ಸರಿಯುತ್ತ ಯಾಂತ್ರಿಕ ಬದುಕಿನತ್ತ ವಾಲಿಕೊಂಡಿದ್ದಾನೆ. ವಿವಿಧ ಋತುಮಾನಗಳಲ್ಲಿ ಪ್ರಕೃತಿ ಪಡೆಯುವ ಸೌಂದರ್ಯ, ರೌದ್ರತೆ, ಅದು ನೀಡುವ ಆನಂದ, ತರುವ ಸಂಭ್ರಮ, ಸಂವೇದಿಸುವ, ಅಭಿವ್ಯಕ್ತಿಸುವ ಮನಸ್ಥಿತಿಯನ್ನು ವಿದ್ಯಾರ್ಥಿಗಳು ಅರಿಯಲಿ ಎಂಬುದೇ ಈ ಕವನದ ಆಶಯ.

**ಕವಿ ಪರಿಚಯ :**



ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಅವರು ೩೧-೧-೧೮೯೬ ರಲ್ಲಿ ಧಾರವಾಡದಲ್ಲಿ ಜನಿಸಿದರು. 'ಅಂಬಿಕಾತನಯದತ್ತ' ಅವರ ಕಾವ್ಯನಾಮ. ಬೇಂದ್ರೆ ಅವರು ಧಾರವಾಡ, ಗದಗ, ಹುಬ್ಬಳ್ಳಿಗಳಲ್ಲಿ ಶಿಕ್ಷಕರಾಗಿ, ಆಕಾಶವಾಣಿಯ ಸಾಹಿತ್ಯ ಸಲಹೆಗಾರರಾಗಿ ಸೇವೆ ಸಲ್ಲಿಸಿದ್ದಾರೆ. ಅವರು ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾನಿಲಯ, ವಾರಣಾಸಿ ಕಾಶಿ ವಿದ್ಯಾಪೀಠಗಳಿಂದ ಗೌರವ ಡಾಕ್ಟರೇಟ್, ಕೇಂದ್ರ ಸಾಹಿತ್ಯ ಅಕಾಡೆಮಿ ಫೆಲೋಶಿಪ್, ಪದ್ಮಶ್ರೀ ಪ್ರಶಸ್ತಿ ಹಾಗೂ ನಾಕುತಂತಿ ಕವನ ಸಂಕಲನಕ್ಕೆ ಭಾರತೀಯ ಜ್ಞಾನಪೀಠ ಪ್ರಶಸ್ತಿ ಪಡೆದಿದ್ದಾರೆ. ಗರಿ, ಗಂಗಾವತರಣ, ನಾದಲೀಲೆ, ಸಖೀಗೀತ, ಉಯ್ಯಾಲೆ, ಅರಳು ಮರಳು ಇತ್ಯಾದಿ ಕವನ ಸಂಕಲನಗಳನ್ನು, ದೆವ್ವದ ಮನೆ, ನಗೆಹೊಗೆ, ಮೊದಲಾದ ನಾಟಕಗಳನ್ನು, 'ಸಾಹಿತ್ಯದ ವಿರಾಟಸ್ವರೂಪ' ಕಾವ್ಯೋದ್ಯೋಗ ಮೊದಲಾದ ವಿಮರ್ಶಾ ಕೃತಿಗಳನ್ನು ಬರೆದಿದ್ದಾರೆ. ಜಯಕರ್ನಾಟಕ ಜೀವನ ಇತ್ಯಾದಿ ಪತ್ರಿಕೆಗಳ ಸಂಪಾದಕರಾಗಿದ್ದು ಮರಾಠಿ ಭಾಷೆಯಲ್ಲೂ ಸಾಹಿತ್ಯವನ್ನು ರಚಿಸಿದ್ದಾರೆ. ಇವರು ೨೬-೧೦-೧೯೮೧ ರಲ್ಲಿ ನಿಧನರಾದರು.

ಪ್ರಸ್ತುತ "ಶ್ರಾವಣಾ ಬಂತು ಕಾಡಿಗೆ" ಕವನವನ್ನು ಅವರ "ಹಾಡುಪಾಡು" ಕವನ ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ.



### ಓದಿ ತಿಳಿಯಿರಿ

ಕಡಲು - ಸಮುದ್ರ ; ಘಟ್ಟ- ಬೆಟ್ಟಗಳ ಸಾಲು; ಪಟ್ಟ- ಪಟ್ಟಾಭಿಷೇಕ; ಬಾನ-ಆಕಾಶ; ಕಾಣೆ-ಕಾಣದಿರುವುದು, ಅದೃಶ್ಯ; ಮುಗಿಲು-ಮೋಡ, ಮೇಘ; ಹೊಳಿ-ಹೊಳೆ, ನದಿ; ಮಳಿ-ಮಳೆ; ಲಗ್ನ- ಮದುವೆ, ವಿವಾಹ; ಮಗ್ನ-ತನ್ಮಯ, ಏಕಾಗ್ರತೆಯಿಂದ ಕೂಡಿದ; ಕೇರಿ-ಓಣಿ. ಝೂರಿ-ಜೋಕಾಲಿಯ ಜೀಕಾಟ; ಅಡರು-ಮೇಲಕ್ಕೆ ಹತ್ತು; ನನಿಕೊನಿ- ಮೊಗ್ಗಿನ ತುದಿ.

## ಗಮನಿಸಿ ತಿಳಿಯಿರಿ

ಶ್ರಾವಣ – ಚಾಂದ್ರಮಾನದ ಐದನೆಯ ತಿಂಗಳು

ರಾವಣ – ಲಂಕೆಯ ಒಬ್ಬ ದೊರೆ. ವಿಶ್ರವಸ್ಸು ಎಂಬುವನ ಮಗ

ಭೈರವ – ಭೀಕರವಾದ, ಭಯಂಕರವಾದ, ಶಿವ

## ಪಠ್ಯ ಆಧಾರಿತ ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

೧. ಕಡಲಿಗೆ ಬಂದ ಶ್ರಾವಣ ಹೇಗೆ ಕಾಣುತ್ತಿದೆ?

________________________________

೨. ಗಾಳಿ ಯಾರ ರೂಪ ತಾಳಿ ಕುಣಿದಿದೆ?

________________________________

೩. ಶ್ರಾವಣದಲ್ಲಿ ಯಾವ ಯಾವುದಕ್ಕೆ ಲಗ್ನವಾಗಿದೆ?

________________________________

೪. ಜೋಕಾಲಿ ಎಲ್ಲಿ ಅಡರ್‍ಯಾವ?

________________________________

### ಆ. ಎರಡು– ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಕಡಲಿಗೆ ಶ್ರಾವಣ ಬಂದಾಗ ಏನಾಗುತ್ತದೆ?

________________________________

________________________________

೨. ಹೊಳೆಗಳಿಗೆ ಶ್ರಾವಣ ಬಂದು ಏನು ಮಾಡಿದೆ?

________________________________

________________________________

೩. ಊರು–ಕೇರಿಗಳಲ್ಲಿ ಶ್ರಾವಣದ ಸಂಭ್ರಮ ಹೇಗೆ ಕಾಣುತ್ತದೆ?

________________________________

________________________________

೪. ಮನೆ, ಮನ, ದನಿಗೆ ಶ್ರಾವಣದಿಂದ ಆದ ಪರಿಣಾಮವೇನು?

________________________________

________________________________

## ಸಾಮರ್ಥ್ಯ ಆಧಾರಿತ ಅಭ್ಯಾಸ






ಈ ಮೇಲಿನ ಚಿತ್ರ ಸರಣಿಯ ಸನ್ನಿವೇಶವನ್ನು ನೋಡಿ. ನಡೆಯುವ ಘಟನೆಯನ್ನು ಬರೆಯಿರಿ.

______________________________________________

______________________________________________

______________________________________________

______________________________________________

## ಭಾಷಾಭ್ಯಾಸ



**ಅ. ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

ಮಾದರಿ – ಮಳೆಯನ್ನು = ಮಳೆ + ಅನ್ನು

೧. ಗಾಳಿಯಿಂದ = ________________

೨. ಘಟ್ಟವನ್ನು = ________________

೩. ಭೂಮಿಯಲ್ಲಿ = ________________

೪. ರಾಜ್ಯವನ್ನು = ________________

**ಆ. ಮಾದರಿಯಂತೆ ಕೂಡಿಸಿ ಬರೆಯಿರಿ.**

ಮಾದರಿ : ಕಡಲು + ಅನ್ನು = ಕಡಲನ್ನು

ಲಗ್ನ + ಆಗಿ = ____________

ಕಾಣೆ + ಆಗು = ____________

ಮನೆ + ಅನ್ನು = ____________

ಮನ + ಅನ್ನು = ____________

ಇ) ಕೂಡಿಸಿ ಬರೆದು ವ್ಯತ್ಯಾಸ ಗುರುತಿಸಿ.

ಮಾದರಿ = ಮಳೆ + ಕಾಲ = ಮಳೆಗಾಲ

೧. ಹೊಸ + ಕನ್ನಡ = ______________

೨. ತಲೆ + ತೂಗು = ______________

೩. ಕಣ್ + ಪನಿ = ______________

೪. ಬಂಡೆ + ಕಲ್ಲು = ______________

೫. ಮೈ + ತೊಳೆ = ______________

ಈ) ಇವುಗಳನ್ನು ಗಮನಿಸಿ.

ಮಾಸಗಳು (ಋತುಗಳು)

ಚೈತ್ರ, ವೈಶಾಖ = ವಸಂತ ಋತು

ಜೇಷ್ಠ, ಆಷಾಢ = ಗ್ರೀಷ್ಮ ಋತು

ಶ್ರಾವಣ, ಭಾದ್ರಪದ = ವರ್ಷ ಋತು

ಆಶ್ವೀಜ, ಕಾರ್ತೀಕ = ಶರತ್ ಋತು

ಮಾರ್ಗಶಿರ, ಪುಷ್ಯ = ಹೇಮಂತ ಋತು

ಮಾಘ, ಫಾಲ್ಗುಣ = ಶಿಶಿರ ಋತು

ಉ) ಈ ಕೆಳಗಿನ ಪದಗಳಿಗೆ ಗ್ರಾಂಥಿಕ ರೂಪ ಬರೆಯಿರಿ.

ಮಾದರಿ : ಕುಣಿದ್ಹಾಂಗ – ಕುಣಿದ ಹಾಗೆ

ಬಂತು –

ಏರ್‍ಯಾವ –

ಅಡರ್‍ಯಾವ –

ಒಡೆದಾವ –

ಉಕ್ಕತಾವ –

ಅದರಾಗ –

## ಪೂರಕ ಓದು

### ಭಾದ್ರಪದ ಸುಪ್ರಭಾತ

ದಿಗುತಟದಲಿ ತೆರೆಯುತಿತ್ತು ಹಗಲಿನಕ್ಷಿ
ಮುಗಿಲಗರಿಯ ಕಾಯಿಸಿತ್ತು ಗಗನಪಕ್ಷಿ
ಪಚ್ಚೆಯಾಗಿ ಮೆರೆಯುತಿತ್ತು ಭುವಿಯ ಮಣ್ಣು
ಪಸುರ ಸಿರಿಯ ಮೇಯುತಿತ್ತು ಕವಿಯ ಕಣ್ಣು.

ಜೇನುತುಪ್ಪದಲ್ಲಿ ತೊಯ್ದ ಹಣ್ಣಿನಂತೆ
ಪೊಸಚೆಲ್ವಿನ ಬಲೆಯ ನೆಯ್ದ ಹೆಣ್ಣಿನಂತೆ
ಸವಿಗೆ ಸವಿಯ ಪೇರಿಸಿತ್ತು ಭದ್ರಮಾಸಂ
ಕವಿಗೆ ಕವಿಯ ತೋರಿಸಿತ್ತು ಸುಪ್ರಭಾತಂ

– ಕುವೆಂಪು



### ಪ್ರಶ್ನೆಗಳಿಗೆ ಉತ್ತರಿಸಿ

೧. ಹಗಲಿನಕ್ಷಿ ಎಲ್ಲಿ ತೆರೆಯುತ್ತಿತ್ತು?

೨. ಸುಪ್ರಭಾತವು ಯಾರಿಗೆ ಯಾರನ್ನು ತೋರಿಸಿತ್ತು?

೩. ಈ ಪದ್ಯದಲ್ಲಿ ಬರುವ ಪ್ರಾಸಪದಗಳನ್ನು ಗುರುತಿಸಿ.

### ಚಟುವಟಿಕೆ

೧. ಬೇಂದ್ರೆಯವರ 'ಪಾತರಗಿತ್ತಿ ಪಕ್ಕ' ಮತ್ತು 'ಇಳಿದು ಬಾ ತಾಯೆ' ಪದ್ಯಗಳನ್ನು ಸಂಗ್ರಹಿಸಿ ರಾಗಬದ್ಧವಾಗಿ ಹಾಡಿ.

# ಗದ್ಯಪಾಠ – ೬

## ಕಚ

**ಪ್ರವೇಶಕ್ಕೆ ಮುನ್ನ :** ಲೋಕ ಹಿತಕ್ಕಾಗಿ ವಿದ್ಯೆಕಲಿಯಲು ವೈರಿ ನಗರ ಪ್ರವೇಶಿಸಿ, ಗುರುವಿನ ಸೇವೆ ಮಾಡಿ ಒಲಿಸಿಕೊಂಡು, ಮೃತ ಸಂಜೀವಿನಿ ವಿದ್ಯೆ ಪಡೆದ ಕಚನ ವಿದ್ಯಾ ಹಂಬಲ ಮತ್ತು ವಿನಯ ಎಲ್ಲ ಕಾಲಕ್ಕೂ ವಿದ್ಯಾರ್ಥಿಗಳಿಗೆ ಹೇಗೆ ಆದರ್ಶವಾಗುತ್ತದೆ ಎಂಬುದನ್ನು ಈ ಕಥೆಯಿಂದ ತಿಳಿಯಬಹುದು.

ಸ್ವರ್ಗದಲ್ಲಿನ ದೇವತೆಗಳಿಗೂ ದೈತ್ಯಲೋಕದ ರಾಕ್ಷಸರಿಗೂ ಒಬ್ಬರನ್ನು ಕಂಡರೆ ಒಬ್ಬರಿಗಾಗದು. ಅವರಿಬ್ಬರೂ ನಾನಾ ವಿದ್ಯೆಗಳಲ್ಲಿ ಪಾರಂಗತರು. ದೇವತೆಗಳಿಗೆ ಬೃಹಸ್ಪತ್ಯಾಚಾರ್ಯರು ಗುರುಗಳು. ದೈತ್ಯರಿಗೆ ಶುಕ್ರಾಚಾರ್ಯರು ಗುರುಗಳು. ಶುಕ್ರಾಚಾರ್ಯರು ಸತ್ತವರನ್ನು ಮತ್ತೆ ಬದುಕಿಸಬಲ್ಲ ಮೃತ ಸಂಜೀವಿನಿ ವಿದ್ಯೆ ಬಲ್ಲವರು. ದೇವತೆಗಳಿಗೆ ಆ ಅನುಕೂಲವಿರಲಿಲ್ಲ. ಹೀಗಾಗಿ ರಾಕ್ಷಸರ ಬಲ ಏರಿತು. ದೇವತೆಗಳಿಗೆ ಪೇಚಾಟಕ್ಕಿಟ್ಟುಕೊಂಡಿತು. ಇದರಿಂದ ಪಾರಾಗಬೇಕಾದರೆ ದೇವತೆಗಳಲ್ಲೇ ಯಾರಾದರೂ ಮೃತಸಂಜೀವಿನಿ ವಿದ್ಯೆ ಕಲಿಯಬೇಕು. "ವೈರಿನಗರ ಹೊಕ್ಕು ಶುಕ್ರಾಚಾರ್ಯರ ಒಲವನ್ನು ಸಂಪಾದಿಸಿ ಮಂತ್ರಸಿದ್ಧಿ ಪಡೆದು ಬರಬಲ್ಲವರು ಯಾರು?" ಎಂದು ದೇವ ಸಭೆಯಲ್ಲಿ ಚರ್ಚಿಸಿದಾಗ "ವಿಪತ್ತುಗಳನ್ನು ಎದುರಿಸಲು ಗುರಿಯ ಸ್ಥಿರತೆ ಹೊಂದಿದ, ಎಲ್ಲರಲ್ಲಿಯೂ ಸ್ನೇಹ ಸಂಪಾದಿಸಬಲ್ಲ ಗುಣ, ಮಧುರ ಮಾತು ನೇರ ನಡೆ ಹೊಂದಿದ 'ಕಚ'. ಇದಕ್ಕೆ ಯೋಗ್ಯ" ಎಂದು ತೀರ್ಮಾನಿಸಲಾಯಿತು. 'ಕಚ' ದೇವಗುರು ಬೃಹಸ್ಪತ್ಯಾಚಾರ್ಯರ ಮಗ.

ವಿನಯಶಾಲಿಯಾದ ಕಚ ಹಿರಿಯರ ಮಾತನ್ನು ಉತ್ಸಾಹದಿಂದ ಒಪ್ಪಿಕೊಂಡ. ತಂದೆ ಬೃಹಸ್ಪತಿಯ ಒಪ್ಪಿಗೆ ಪಡೆದು ಅಸುರರ ನಗರವನ್ನು ಸೇರಿ ಶುಕ್ರಾಚಾರ್ಯರ ಸನ್ನಿಧಿಗೆ ಬಂದು ನಿಂತ. ತಲೆಬಾಗಿ ಕೈ ಮುಗಿದು "ನಾನು ದೇವಗುರು ಬೃಹಸ್ಪತಿಯ ಮಗ ತಮ್ಮ ಮುಂದೆ ವಿದ್ಯಾರ್ಥಿಯಾಗಿ ನಿಂತಿದ್ದೇನೆ ನನ್ನನ್ನು ಕಚನೆಂದು ಕರೆಯುತ್ತಾರೆ". ಎಂದು ವಿನಯದಿಂದ ಪರಿಚಯಿಸಿಕೊಂಡ.



ಕಚನ ಮುಖದಲ್ಲಿನ ಸುಸಂಸ್ಕಾರ, ತೇಜಸ್ಸು, ಸಂಯಮ ಶುಕ್ರಾಚಾರ್ಯರನ್ನು ಆಕರ್ಷಿಸಿದವು. ದೇವತೆಗಳ ಗುರು ತನ್ನ ಮಗನನ್ನು ನನ್ನ ಬಳಿ ಶಿಷ್ಯನಾಗಲು ಕಳುಹಿಸುವ ಉದ್ದೇಶವೇನಿರಬಹುದು? ಬೃಹಸ್ಪತ್ಯಾಚಾರ್ಯರು ಲೌಕಿಕ–ಪಾರಲೌಕಿಕ ವಿದ್ಯೆಗಳಲ್ಲಿ ನಿಸ್ಸೀಮರು. ಅವರು ಅರಿಯದುದು ಮೃತಸಂಜೀವಿನಿ ವಿದ್ಯೆಯೊಂದೇ, ಅದಕ್ಕಾಗಿಯೇ ಬಾಲಕನು ಬಂದಿರಬೇಕು ಎಂದುಕೊಂಡರು. ಆದರೂ ಯೋಗ್ಯನಾದ ವಿದ್ಯಾರ್ಥಿ ವಿದ್ಯೆಯನ್ನು ಬೇಡಿ ಬಂದರೆ ಗುರುವಾದವನು

ನಿರಾಕರಿಸಬಾರದು, ಆತನು ಯಾರೇ ಆಗಿರಲಿ ಉಪದೇಶಿಸಬೇಕಾದುದು ಗುರುವಿನ ಧರ್ಮ. ವಿದ್ಯೆ ಬೆಳಕಿನ ಹಾಗೆ. ಕಚನಂತಹ ಶ್ರದ್ಧಾಳು ಬಂದು ಕೇಳಿದಾಗ ಶುಕ್ರಾಚಾರ್ಯರಿಗೆ ನಿರಾಕರಿಸಲಾಗಲಿಲ್ಲ.

ಶುಕ್ರಾಚಾರ್ಯರು ತಮ್ಮ ಮಗಳು ದೇವಯಾನಿಯನ್ನು ಕಚನಿಗೆ ಪರಿಚಯಿಸಿದರು. ಕಚ ಅಸೀಮ ಶ್ರದ್ಧೆಯಿಂದ ಗುರುಸೇವೆ, ಜಪತಪ, ಜಾಗರೂಕವಾದ ನಡವಳಿಕೆಯಿಂದ ಲೀಲಾಜಾಲವಾಗಿ ವಿದ್ಯೆ ಕಲಿಯುತ್ತ ಸಾಗಿದ. ತಂದೆ ಮಗಳ ವಿಶ್ವಾಸಕ್ಕೆ ಪಾತ್ರನಾದ.



ಶುಕ್ರಾಚಾರ್ಯರ ದಾನವ ಶಿಷ್ಯರಿಗೆ ಕಚ ನುಂಗಲಾರದ ತುತ್ತಾದ. ತಮ್ಮ ಅಸುರ ಗುರುವಿನ ಮನವನ್ನು ತಮಗಿಂತಲೂ ಹೆಚ್ಚಾಗಿ ಗೆದ್ದುಕೊಂಡ ಕಚನ ಬಗ್ಗೆ ಅಸೂಯೆ ಮೂಡಿತು. ಒಮ್ಮೆ ಕಚ ಶುಕ್ರಾಚಾರ್ಯರ ಆಕಳನ್ನು ಮೇಯಿಸುತ್ತಿರುವಾಗ ರಾಕ್ಷಸರು ಹೊಂಚು ಹಾಕಿ ಅವನನ್ನು ಕೊಂದರು. ಆಕಳು ಮಾತ್ರ ಮನೆಗೆ ಬಂದಿತು. ಕಚ ಬರಲಿಲ್ಲ. ಶುಕ್ರಾಚಾರ್ಯರು ಯೋಗ ದೃಷ್ಟಿಯಿಂದ ಕಾರಣ ತಿಳಿದು ತಮ್ಮ ಮಂತ್ರ ಬಲದಿಂದ ಕಚನನ್ನು ಬದುಕಿಸಿದರು. ಮತ್ತೊಮ್ಮೆ ಕೊಂದರೂ ಶುಕ್ರಾಚಾರ್ಯರು ಅವನನ್ನು ಬದುಕಿಸಿದರು. ಆದರೂ ಬದುಕಿ ಬಂದ ಕಚನನ್ನು ಕಂಡು ರಾಕ್ಷಸರು ಕುದಿದುಹೋದರು. ಏನಾದರೂ ಮಾಡಿ ಮತ್ತೆ ಆತ ಬದುಕಿ ಬಾರದಂತೆ ಮಾಡಬೇಕೆಂದು ತೀರ್ಮಾನಿಸಿ ಉಪಾಯ ಹುಡುಕಿದರು. ಕಚನನ್ನು ಕೊಂದು ಸುಟ್ಟು ಬೂದಿ ಮಾಡಿದರು. ಆ ಬೂದಿಯನ್ನು ಪಾನೀಯದಲ್ಲಿ ಕದಡಿ ನಯವಿನಯದಿಂದ ನಟಿಸಿ ಶುಕ್ರಾಚಾರ್ಯರಿಗೆ ಕುಡಿಸಿದರು.

ಸಂಜೆಯಾದರೂ ಕಚ ಮನೆಗೆ ಬಾರದಿದ್ದಾಗ ದೇವಯಾನಿ ಹಾಗೂ ಶುಕ್ರಾಚಾರ್ಯರಿಗೆ ಚಿಂತೆಯಾಯಿತು. ಶುಕ್ರಾಚಾರ್ಯರು ದಿವ್ಯದೃಷ್ಟಿಯಿಂದ ನೋಡಿದರು. "ಕಚ ತನ್ನ ಹೊಟ್ಟೆಯೊಳಗೆ ಇದ್ದಾನೆ. ಅವನು ಬದುಕುವುದು ಸಾಧ್ಯವಿಲ್ಲ" ಎಂದು ಮಗಳಿಗೆ ಹೇಳಿದರು. ಆದರೆ ಆಕೆಯ ಹಠದಿಂದ ಕಚನನ್ನು ಬದುಕಿಸಲು ಮುಂದಾದರು. "ಕಚನನ್ನೂ ಉಳಿಸಿ ತಾವೂ ಉಳಿಯುವ ಮಾರ್ಗವೆಂತು?" ಎಂದು ಚಿಂತಿಸಿದರು. ಕೊನೆಗೆ ತನ್ನ ಒಳಗಿರುವ ಕಚನಿಗೆ ಮೃತ ಸಂಜೀವಿನಿ ಮಂತ್ರವನ್ನು ಉಪದೇಶಿಸಿ ಅವನು ಹೊರಬಂದ ನಂತರ ಅವನಿಂದ ತಾನು ಬದುಕುವುದು ಪರಿಹಾರವಾಗಿ ಕಾಣಿಸಿತು. ಅದರಂತೆ ಕಚನನ್ನು ಬದುಕಿಸಲು ನಿರ್ಧರಿಸಿದರು. ಶುಕ್ರಾಚಾರ್ಯರು ಮಂತ್ರೋಪದೇಶ ಮಾಡಿದರು. ಆಗ ಕಚ ಗುರುವಿನ ದೇಹ ಸೀಳಿಕೊಂಡು ಹೊರಬಂದ. ನಂತರ ಗುರೂಪದೇಶದ ಮಹಿಮೆಯಿಂದ ಶುಕ್ರಾಚಾರ್ಯರನ್ನು ಬದುಕಿಸಿದ. ಶುಕ್ರಾಚಾರ್ಯರು ಸಂತೋಷದಿಂದ ಅಪ್ಪಿಕೊಂಡು, ಆಶೀರ್ವದಿಸಿ ಬೀಳ್ಕೊಟ್ಟರು.

**ಆಕರ :** ಈ ಕಥಾ ಭಾಗವನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದಿಂದ ಪ್ರಕಟಗೊಂಡಿರುವ (1969) "ಪುರಾಣ ನಾಮ ಚೂಡಾಮಣಿ" ಕೃತಿಯನ್ನು ಆಧರಿಸಿ ರಚಿಸಿದೆ.

**ಸಾಮರ್ಥ್ಯ :** ಸುಮಾರು ೩೫೦೦ ಪದಗಳನ್ನು ಓದಿ ಗ್ರಹಿಸುವುದು.

**ಆಶಯ :** ಭರತ ಭೂಮಿ ಪುಣ್ಯ ಪುರುಷರ ನೆಲೆಬೀಡು. ನಮ್ಮ ಪುರಾಣ ಕಥೆಗಳು ಪರಂಪರೆಯನ್ನು ರೂಪಿಸುವಲ್ಲಿ, ಬೆಳೆಸುವಲ್ಲಿ, ಪ್ರತಿನಿಧಿಸುವಲ್ಲಿ ವಹಿಸಿದ ಪಾತ್ರ ಅನನ್ಯವಾದುದು. ಪುರಾಣಗಳಲ್ಲಿ ಬರುವ ಬಾಲ ಮಹಾ ಚೇತನಗಳು ತೋರಿದ ತ್ಯಾಗ, ಶೌರ್ಯ, ವಿವೇಕ, ಸಮಯಪ್ರಜ್ಞೆ, ಆದರ್ಶ, ವಿನಯಗಳು ನಮ್ಮ ಇಂದಿನ ಮಕ್ಕಳಿಗೆ ಮಾದರಿ. ಅಂತಹ ಪುರಾಣ ಬಾಲಕರನ್ನು ಪರಿಚಯಿಸುವುದರೊಂದಿಗೆ ಅನಾದಿಕಾಲದಿಂದ ಬೆಳೆದುಬಂದ ನಮ್ಮ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುವುದು ಈ ಪಾಠದ ಆಶಯ.

## ಓದಿ ತಿಳಿಯಿರಿ

ದೈತ್ಯ–ರಾಕ್ಷಸ; ಪಾರಂಗತ–ಚೆನ್ನಾಗಿ ಅರಿತವನು; ಪೇಚಾಟ–ಪರದಾಟ; ಮಂತ್ರಸಿದ್ಧಿ–ಮಂತ್ರವಶವಾಗುವುದು; ವಿಪತ್ತು–ಕೇಡು, ಆಪತ್ತು; ಸ್ಥಿರತೆ–ಕದಲದ, ಅಚಲವಾದ, ಶಾಂತವಾದ; ಅಸುರ–ರಾಕ್ಷಸ; ಸನ್ನಿಧಿ–ಹತ್ತಿರ; ಸಂಯಮ–ಹತೋಟಿ, ಹಿಡಿತ; ನಿಸ್ಸೀಮ–ನಿಪುಣ; ವಿದ್ವಾಂಸ–ಪಂಡಿತ; ಶ್ರದ್ಧಾಳು–ನಂಬಿಕೆಯುಳ್ಳವ, ಶ್ರದ್ಧೆ ಉಳ್ಳವ, ವಿಶ್ವಾಸವುಳ್ಳವ; ಅಸೀಮ–ಮೇರೆಯಿಲ್ಲದ, ಬಹಳ; ಶಂಕಿಸು–ಅನುಮಾನಿಸು; ದಿವ್ಯ–ಶ್ರೇಷ್ಠವಾದ; ಒಡಲು–ದೇಹ; ಕಡಲು–ಸಮುದ್ರ; ಕದಡು–ಕಲಕು; ಏಳ್ಗೆ–ಪ್ರಗತಿ; ಕಂಗೊಳಿಸು–ಆಕರ್ಷಕವಾಗಿ ಕಾಣು; ಅಸೂಯೆ–ಹೊಟ್ಟೆಕಿಚ್ಚು; ಸೇವಾತತ್ಪರ–ಸೇವೆಯಲ್ಲಿ ನಿರತನಾದ; ಪೂರ್ವರೂಪ–ಮೊದಲ ಆಕಾರ;



## ಗಮನಿಸಿ ತಿಳಿಯಿರಿ

ಕಚ – ದೇವಲೋಕದ ಗುರು ಬೃಹಸ್ಪತಾಚಾರ್ಯರ ಮಗ

ದೇವಯಾನಿ – ಶುಕ್ರಾಚಾರ್ಯರ ಮಗಳು

ದೈತ್ಯಲೋಕ – ಅಸುರಲೋಕ, ರಾಕ್ಷಸಲೋಕ

ಮೃತಸಂಜೀವಿನಿ ವಿದ್ಯೆ – ಸತ್ತವರನ್ನು ಮತ್ತೆ ಬದುಕಿಸುವ ವಿದ್ಯೆ.

ದೇವಸಭೆ – ದೇವೇಂದ್ರನ ಒಡ್ಡೋಲಗ, ದೇವತೆಗಳ ಸಭೆ.

ನುಂಗಲಾರದ ತುತ್ತು – ಸಹಿಸಲು ಸಾಧ್ಯವಾಗದ, ಅಸಹನೀಯ ಸಂದರ್ಭವನ್ನು ವಿವರಿಸುವಾಗ ಬಳಸುವ ನುಡಿಗಟ್ಟು

ಯೋಗದೃಷ್ಟಿ – ಧ್ಯಾನದ ಮೂಲಕ ಬರುವ ಅಲೌಕಿಕ ಜ್ಞಾನ.

ಕುದಿದು ಹೋಗು – ಸಿಟ್ಟಿನ ಪರಾಕಾಷ್ಠತೆಯನ್ನು ಹೇಳುವಾಗ ಬಳಸುವ ನುಡಿಗಟ್ಟು
ಲೌಕಿಕ – ಲೋಕಪ್ರಸಿದ್ಧವಾದ, ಲೋಕಕ್ಕೆ ಸಂಬಂಧಿಸಿದ, ಪಾರಮಾರ್ಥಿಕವಲ್ಲದ
ಪಾರಲೌಕಿಕ – ಪರಲೋಕಕ್ಕೆ ಸಂಬಂಧಿಸಿದ

## ಪಠ್ಯ ಆಧಾರಿತ ಅಭ್ಯಾಸ

### ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

೧. ದೇವತೆಗಳ ಗುರುವಿನ ಹೆಸರೇನು?

_______________

೨. ಶುಕ್ರಾಚಾರ್ಯರು ಯಾವ ವಿದ್ಯೆ ಬಲ್ಲವರಾಗಿದ್ದರು?

_______________

೩. ಕಚನ ಉತ್ತಮ ಗುಣಗಳಾವುವು?

_______________

೪. ಬೃಹಸ್ಪತಾಚಾರ್ಯರು ಯಾವ ವಿದ್ಯೆಗಳಲ್ಲಿ ನಿಸ್ಸೀಮರು?

_______________

### ಆ) ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಮೃತಸಂಜೀವಿನಿ ವಿದ್ಯೆ ಎಂದರೇನು? ಅದನ್ನು ಯಾರು ಬಲ್ಲವರಾಗಿದ್ದರು?

_______________

_______________

೨. ಶುಕ್ರಾಚಾರ್ಯರು ಕಚನಿಗೆ ವಿದ್ಯೆ ಕಲಿಸಲು ನಿರಾಕರಿಸಲಿಲ್ಲ. ಏಕೆ?

_______________

_______________

೩. ಗುರುಗಳಾದ ಶುಕ್ರಾಚಾರ್ಯರನ್ನು ಕಚ ಹೇಗೆ ಬದುಕಿಸಿದ?

_______________

_______________

## ಇ) ಯಾರು/ ಯಾರಿಗೆ ಹೇಳಿದರು?

೧) "ನಾನು ದೇವಗುರು ಬೃಹಸ್ಪತಿಯ ಮಗ"

_______________________________________________

_______________________________________________

೨) "ಕಚನನ್ನೂ ಉಳಿಸಿ ತಾವೂ ಉಳಿಯುವ ಮಾರ್ಗವೆಂತು"

_______________________________________________

_______________________________________________

೩) "ಯೋಗ್ಯನಾದ ವಿದ್ಯಾರ್ಥಿ ವಿದ್ಯೆಯನ್ನು ಬೇಡಿ ಬಂದರೆ ಗುರುವಾದವನು ನಿರಾಕರಿಸಬಾರದು".

_______________________________________________

_______________________________________________

## ಈ) ಸರಿಯಾಗಿ ಹೊಂದಿಸಿ ಬರೆಯಿರಿ.

| | ಅ | | ಆ | |
|---|---|---|---|---|
| ೧) | ಶುಕ್ರಾಚಾರ್ಯ | – | ದೇವಗುರು | ________ |
| ೨) | ಕಚ | – | ಕಿನ್ನರ ಲೋಕದವರು | ________ |
| ೩) | ಬೃಹಸ್ಪತಿ | – | ಮೃತಸಂಜೀವಿನಿ ಬಲ್ಲವರು | ________ |
| ೪) | ದೇವಯಾನಿ | – | ಬೃಹಸ್ಪತಾಚಾರ್ಯರ ಮಗ | ________ |
| ೫) | ರಾಕ್ಷಸರು | – | ಶುಕ್ರಾಚಾರ್ಯರ ಮಗಳು | ________ |
| | | | ದೈತ್ಯಲೋಕದವರು | ________ |

## ಉ) ಈ ಕೆಳಗಿನ ಪದಗಳನ್ನು ಬಳಸಿಕೊಂಡು ವಾಕ್ಯರಚನೆ ಮಾಡಿ.

೧) ಸಂಯಮ : _______________________________

೨) ಅಸೀಮ : _______________________________

೩) ಪ್ರಯೋಜನ : _______________________________

೪) ಬೀಳ್ಕೊಡು : _______________________________

ಊ) ಈ ಕೆಳಗಿನ ಪದಗಳಿಗೆ ವಿರುದ್ಧ ಅರ್ಥಕೊಡುವ ಪದಗಳನ್ನು ಬರೆಯಿರಿ.

೧) ಉತ್ಸಾಹ x ______

೨) ಯೋಗ್ಯ x ______

೩) ಚಿಂತೆ x ______

೪) ಪ್ರಯೋಜನ x ______

೫) ನಂಬಿಕೆ x ______

## ಭಾಷಾ ಚಟುವಟಿಕೆ

ಅ) ಅರ್ಥಕೋಶದ ಸಹಾಯದಿಂದ ಈ ಕೆಳಗಿನ ಪದಗಳ ಅರ್ಥ ಗುರುತಿಸಿ ಬರೆಯಿರಿ.

೧) ಶರೀರ – ಶಾರೀರ : ______

೨) ವಿನಯ – ವಿಜಯ : ______

೩) ಚಿಂತೆ – ಚಿತೆ : ______

೪) ವಿದ್ವಾಂಸ – ವಿಧ್ವಂಸ : ______

ಆ) ಈ ಕೆಳಗಿನ ಪದಗಳಿಗೆ ಸಮಾನ ಅರ್ಥಕೊಡುವ ಎರಡೆರಡು ಪದಗಳನ್ನು ಬರೆಯಿರಿ.

೧) ಅಸೂಯೆ – ______

೨) ಸ್ನೇಹ – ______

೩) ಶಪಿಸು – ______

ಇ) ಮಾದರಿಯಂತೆ ಬರೆಯಿರಿ.

ಮಾದರಿ : ಆಡು→ಮೇಕೆ (ನಾಮಪದ) ಆಡು→ಆಟವಾಡು (ಕ್ರಿಯಾಪದ)

೧) ಕಾಡು ______ ______ ______ ______

೨) ಅಲೆ ______ ______ ______ ______

೩) ಅರಸು ______ ______ ______ ______

೪) ಪಡೆ ______ ______ ______ ______

೫) ಬೇಡ ______ ______ ______ ______

**ಈ) ಹಿಂದು ಮುಂದಾದ ಅಕ್ಷರಗಳನ್ನು ಸರಿಯಾಗಿ ಜೋಡಿಸಿ ಪೂರ್ಣ ಅರ್ಥಕೊಡುವ ಪದ ರಚಿಸಿ.**

ವಗತೆದೇಳು ________________ ನಶಾಯವಿಲಿ ________________

ಗಜಾಕರೂ ________________ ಗೊಕಂಸಿರುಳಿವ ________________

**ಉ) ಈ ಕೆಳಗಿನ ಚೌಕದಲ್ಲಿ ಪೌರಾಣಿಕ ವ್ಯಕ್ತಿಗಳ ಹೆಸರುಗಳಿವೆ. ಅವುಗಳಿಗೆ ವೃತ್ತ ಹಾಕಿ ಗುರುತಿಸಿ.**

| | | | | | | | | |
|---|---|---|---|---|---|---|---|---|
| ಭೀ | ರಾ | ಣ | ಗ | ದು | ರ್ಯೋ | ಧ | ನ | ಲ |
| ಮ | ಲ | ಣ | ಣ | ರಾ | ಜಾ | ಹ್ನ | ವಿ | ಕ್ಷಿ |
| ಬ | ಲ | ಮ | ಪ | ಮ | ಕುಂ | ಭ | ಕ | ರ್ಣ |
| ಶಿ | ವ | ಕೃ | ಘ | ಕಾ | ದ | ಶ | ರ | ಧ |
| ಬಿ | ವಿ | ಷ್ಣ | ಭ | ರ್ತಿ | ಶ | ಊ | ರ್ಮಿ | ಳಾ |
| ನ | ಚಿ | ತ | ರ | ಕೇ | ಕು | ನ | ಕು | ಲ |
| ಕ | ಮಾ | ಏ | ತ | ಯ | ನಿ | ಶ | ಕು | ನಿ |
| ರ್ಣ | ರ್ಕಂ | ಕ | ಶ | ಅ | ಸ | ಹ | ದೇ | ವ |
| ಲ | ಡೇ | ಲ | ತ್ರು | ರ್ಜು | ಧ | ರ್ಮ | ರಾ | ಯ |
| ವ | ಯ | ವ್ಯ | ಘ್ನ | ನ | ಮಾ | ದ್ರಿ | ಕುಂ | ತಿ |



## ಹೆಚ್ಚಿನ ಓದು

ಪ್ರಹ್ಲಾದ, ಕಾರ್ತಿಕೇಯ, ಏಕಲವ್ಯ, ಅಭಿಮನ್ಯು, ಬಬ್ರುವಾಹನ ಮೊದಲಾದ ಪೌರಾಣಿಕ ವ್ಯಕ್ತಿಗಳ ಕಥೆಗಳನ್ನು ಓದಿ ತಿಳಿಯಿರಿ.

## ಪೂರಕ ಓದು

### ನಚಿಕೇತ

ಕಠೋಪನಿಷತ್ತಿನಲ್ಲಿ ಬರುವ ಒಬ್ಬ ವಿಶಿಷ್ಟ ಬಾಲಕ ನಚಿಕೇತ. ಇವನು ವಾಜಶ್ರವಸ ವಿಶ್ವವರಾದೇವಿಯವರ ಮಗ. ವಾಜಶ್ರವಸನು "ವಿಶ್ವಜಿತ್" ಎಂಬ ಯಾಗ ಮಾಡಿ ಆ ಯಾಗದ ಫಲಕ್ಕಾಗಿ, ದಾನ ಕೊಡುವ ಸಂದರ್ಭದಲ್ಲಿ ಬಡಕಲು ಹಸುಗಳನ್ನು ಕೊಡುತ್ತಿದ್ದ. ಇದನ್ನು ಕಂಡು ವ್ಯಥೆಗೊಂಡ ಮಗ ನಚಿಕೇತ ತಂದೆಯ ಎದುರಿಗೆ ನಿಂತು "ನನ್ನನ್ನು ಯಾರಿಗೆ ದಾನ

ಮಾಡುತ್ತೀರಿ? ಎಂದ. ತಂದೆ ಉತ್ತರಿಸಲಿಲ್ಲ. ನಚಿಕೇತ ಮತ್ತೆ ಮತ್ತೆ ಕೇಳಿದ. ಕೋಪಿಷ್ಠರಾದ ವಾಜಶ್ರವಸ 'ಯಮನಿಗೆ' ಎಂದರು. ನಚಿಕೇತ ನಿರ್ಭೀತನಾಗಿ ಯಮಲೋಕ ಸೇರಿದ. ನಚಿಕೇತ ಯಮನ ಪುರಿಗೆ ಬಂದಾಗ ಯಮ ಇರಲಿಲ್ಲ. ಅವನಿಗಾಗಿ ನಚಿಕೇತ ಮೂರು ದಿನ ನಿರಾಹಾರಿಯಾಗಿ ಕಾದ. ಕೊನೆಗೂ ಬಂದ ಯಮ. ನಚಿಕೇತ ಉಪವಾಸವಿದ್ದುದಕ್ಕಾಗಿ ಮರುಗಿದ. ಅವನಿಗೆ ಯೋಗ್ಯ ಸತ್ಕಾರ ಮಾಡಿ ಮೂರು ವರಗಳನ್ನು ಕೊಡುವುದಾಗಿ ಹೇಳಿದ.

ನಚಿಕೇತ "ಮೊದಲನೆಯದಾಗಿ ನನ್ನ ತಂದೆಯ ಕೋಪ ಕಡಿಮೆಯಾಗಬೇಕು, ಎರಡನೆಯದಾಗಿ ಅಗ್ನಿ ವಿದ್ಯೆಯನ್ನು ತಿಳಿಸಿಕೊಡಬೇಕು", ಎಂದು ಕೇಳಿದ. ಯಮ ಕರುಣಿಸಿದ. ಮೂರನೆಯದಾಗಿ "ಮನುಷ್ಯ ಮೃತನಾದ ನಂತರ ಆತ್ಮ ಉಳಿಯುವುದೇ? ಅಳಿಯುವುದೇ?" ಎಂಬುದನ್ನು ತಿಳಿಯಲು ಆತ್ಮವಿದ್ಯೆ ತಿಳಿಸಬೇಕೆಂದು ಕೋರಿದ. ಯಮ, "ಅದು ಕಷ್ಟದ್ದು ಬೇರೆ ಭೋಗ ಭಾಗ್ಯಗಳನ್ನು ಕೊಡುತ್ತೇನೆ" ಎಂದು ಪ್ರಲೋಭನೆ ಒಡ್ಡಿದ. ನಚಿಕೇತ ನಿರಾಕರಿಸಿದ, ಆತ್ಮ ವಿದ್ಯೆಯನ್ನೇ ಬಯಸಿದ. ಕೊನೆಗೆ ಅವನ ಹಠಕ್ಕೆ ಮಣಿದ ಯಮ ನಚಿಕೇತನಿಗೆ ಆತ್ಮ ವಿದ್ಯೆಯನ್ನು ಕರುಣಿಸಿ ಸಂತೋಷದಿಂದ ಕಳುಹಿಸಿ ಕೊಟ್ಟ.

**ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ವಾಜಶ್ರವಸನು ನಚಿಕೇತನನ್ನು ಯಾರಿಗೆ ದಾನ ಮಾಡುತ್ತೇನೆ ಎಂದನು?
2. ಯಮಲೋಕ ಸೇರಿದ ನಚಿಕೇತ ಮೂರು ದಿನಗಳನ್ನು ಹೇಗೆ ಕಳೆದನು?
3. ನಚಿಕೇತ ಕೇಳಿದ ಮೂರು ವರಗಳಾವುವು?





## ಗದ್ಯಪಾಠ ೭

# ಬೇರಿಗೆ ನೀರು

**ಪ್ರವೇಶಕ್ಕೆ ಮುನ್ನ :** ಹಸಿರನ್ನು ಬೆಳೆಸಿ. ಹಸಿರನ್ನು ಉಳಿಸಿದರೆ ಹಸನಾಗುವುದು ಪರಿಸರ. ಬೆಳೆಸಿದ ಗಿಡಗಳನ್ನು ಎಚ್ಚರಿಕೆಯಿಂದ ರಕ್ಷಿಸದಿದ್ದರೆ ಆಗಬಹುದಾದ ಅನಾಹುತವೇನು ಎಂಬುದನ್ನು ಈ ನಾಟಕದಿಂದ ತಿಳಿಯೋಣ.

### ದೃಶ್ಯ : ೧

(ಸುಂದರ ಉದ್ಯಾನವನ, ಅದರ ಮಾಲಿ ಏನನ್ನೋ ಯೋಚಿಸುತ್ತಾ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿದ್ದಾನೆ. ಕಪಿಗಳ ನಾಯಕ ಉದ್ಯಾನದೊಳಗೆ ಪ್ರವೇಶಿಸುತ್ತಾನೆ.)



**ಕಪಿನಾಯಕ** : ಮಿತ್ರಾ, ಮಿತ್ರಾ....

**ಮಾಲಿ** : (ಮಾಲಿ ತಿರುಗಿ ನೋಡಿದ) ಓ! ನೀನಾ, ಬಾ ಬಾ, ಮೂರು ನಾಲ್ಕು ದಿನಗಳಿಂದ ಇತ್ತ ಸುಳಿಯಲೇ ಇಲ್ಲ ಏಕೆ?

**ಕಪಿನಾಯಕ** : ಕುಂಭಮೇಳ ನೋಡಲು ಪ್ರಯಾಗಕ್ಕೆ ಹೋಗಿದ್ದೆ.

**ಮಾಲಿ** : ನೀನೇ ಪುಣ್ಯವಂತ.

**ಕಪಿನಾಯಕ** : ಅದಕ್ಕೇನು? ನೀನೂ ನೋಡಿ ಬಂದರಾಯ್ತು.

**ಮಾಲಿ** : (ನಿಟ್ಟುಸಿರು ಬಿಡುತ್ತಾ) ಅಯ್ಯೋ! ನನಗೆಲ್ಲಿದೆ ಆ ಭಾಗ್ಯ?

**ಕಪಿನಾಯಕ** : ಅದೇಕೆ ಹಾಗೆ ಹೇಳುತ್ತೀ?

**ಮಾಲಿ** : ಈ ಉದ್ಯಾನವನವನ್ನು ನೋಡಿಕೊಳ್ಳಬೇಕು. ಹೇಗೆ ಹೋಗಲಿ?

**ಕಪಿನಾಯಕ** : ಏಕೆ? ಮಿತ್ರನಾದ ನಾನಿಲ್ಲವೇ? ನಾನು ನೋಡಿಕೊಳ್ಳುವೆ. ನೀನು ಪ್ರಯಾಗಕ್ಕೆ ಹೊರಡು.

**ಮಾಲಿ** : (ಆಶ್ಚರ್ಯ ಹಾಗೂ ಆನಂದದಿಂದ) ಹಾಗಾದರೆ ನಾನು ನನ್ನ ಮಡದಿ ಮಕ್ಕಳೊಂದಿಗೆ ಹೋಗಿಬರಲೇ?

**ಕಪಿನಾಯಕ** : ಮತ್ತೇಕೆ ತಡ? ಹೋಗು ಸಿದ್ಧತೆಮಾಡಿಕೋ.

**ಮಾಲಿ** : ಮಿತ್ರರೆಂದರೆ ನಿನ್ನ ಹಾಗೆ ಇರಬೇಕು.

**ಕಪಿನಾಯಕ** : ಸಮಯದಲ್ಲಿ ಸಹಾಯ ಮಾಡುವುದು ಮಿತ್ರಧರ್ಮ. ಹೊಗಳಿಕೆ ಸಾಕು ಬೇಗ ಹೊರಡು.

**ಮಾಲಿ** : (ತನ್ನ ಹೆಗಲ ಮೇಲಿನ ಚೌಕವನ್ನು ಕೊಡವಿ ಹೊರಡುತ್ತಾ) ಮಿತ್ರ, ಗಿಡಗಳ ಬೇರಿಗೆ ನೀರು ಕುಡಿಸು. ಇಲ್ಲವಾದರೆ ಅವು ಒಣಗಿ ಹೋಗುತ್ತವೆ. ಜೋಪಾನ ನಾನಿನ್ನು ಹೋಗಿ ಬರಲೇ?

(ಮಾಲಿ ಉದ್ಯಾನವನದಿಂದ ಹೋಗುವನು)



## ದೃಶ್ಯ : ೨

(ಮೂರು ಕಪಿಗಳು ನೀರು ತುಂಬಿದ ಕೊಡ ಹಿಡಿದು ಗಿಡದ ಮುಂದೆ ನಿಂತಿವೆ. ಜೊತೆಯಲ್ಲಿ ಕಪಿನಾಯಕನೂ ಇದ್ದಾನೆ.)

**ಕಪಿನಾಯಕ** : (ಆಜ್ಞೆ ಮಾಡುವ ಧ್ವನಿಯಲ್ಲಿ) ಮಿತ್ರನಿಗೆ ಕೊಟ್ಟ ಮಾತಿನಂತೆ ಈ ವನವನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಗಿಡಗಳ ಬೇರಿಗೆ ನೀರು ಕುಡಿಸಬೇಕು.

**ಮೊದಲನೆಯ ಕಪಿ** : ಒಡೆಯಾ, ಗಿಡಗಳಿಗೆ ಬೇರು ಎಲ್ಲಿರುತ್ತದೆ?

**ಕಪಿನಾಯಕ** : ಬೇರು ಎಲ್ಲಿದೆ ಎಂದು ತಿಳಿದೇ ನೀರು ಕುಡಿಸೋಣ. (ಗಿಡದೊಂದಿಗೆ) ಎಲೈ ಗಿಡವೇ ನಿನ್ನ ಬೇರು ತೋರಿಸು. ನಾವು ನೀರು ಕುಡಿಸುತ್ತೇವೆ.

**ಮೂರನೆಯ ಕಪಿ** : (ಗಿಡದ ಎಲೆಗಳನ್ನು ಹಿಡಿದು) ಅರೇ ಇದನ್ನು ನೋಡಿರಿ! ಇದೇ ಬೇರಿರಬೇಕು.



ಎರಡನೆಯ ಕಪಿ : ಆತುರ ಬೇಡ, "ಆತುರಗಾರನಿಗೆ ಬುದ್ಧಿ ಮಟ್ಟ" ಎಂದು ತಿಳಿದವರು ಹೇಳುತ್ತಾರೆ.

ಕಪಿನಾಯಕ : ನೀರುಕೊಡಿ ಇಲ್ಲಿ (ಎರಡನೇ ಕಪಿ ನೀರು ಕೊಟ್ಟಿತು. ಕಪಿನಾಯಕ ಎಲೆಯ ಮೇಲೆ ಸುರಿಯಿತು) ಬೇರು ಎಲ್ಲಿದೆ ಎಂದು ಈಗ ನೋಡಿ.

ಮೂರನೆಯ ಕಪಿ : (ತಲೆ ಅಲ್ಲಾಡಿಸಿ) 'ಊಹುಂ ಇದು ನೀರು ಕುಡಿಯುತ್ತಿಲ್ಲ' ನೀರೆಲ್ಲಾ ಚೆಲ್ಲುತ್ತಿದೆ.

ಕಪಿನಾಯಕ : (ಕೋಪದಿಂದ ಗಿಡದೊಂದಿಗೆ) ಇರು ನಿನಗೆ ಮಾಡುತ್ತೇನೆ! (ಬೇರು ಸಹಿತ ಕಿತ್ತು ಹಿಡಿದು) ಹೀಗೆ ಮಾಡಿದರೆ ಬಾಯಿ ಬಿಡುವೆ?

ಮೊದಲನೆಯ ಕಪಿ : (ಬೇರನ್ನು ಮುಟ್ಟಿ ನೋಡಿ) ಒಡೆಯಾ! ಇದೇನಿದು ನಮ್ಮ ಬಾಲದಂತಿದೆ. ಹಸಿಯಾಗಿದೆ. ಇದೇ ಬೇರಿರಬೇಕು.

ಕಪಿನಾಯಕ : (ಬೇರನ್ನು ತೋರಿಸುತ್ತಾ) ಹೌದಲ್ಲಾ! ಇದಕ್ಕೂ ಬಾಲವಿದೆ. ಹಸಿಯಾಗಿದೆ ಇದೇ ಬೇರಿರಬೇಕು.

ಎರಡನೆಯ ಕಪಿ : ಒಡೆಯಾ! ಇದು ನೀರನ್ನೇ ಕುಡಿಯದೆ ಹೇಗೆ ಹಸಿಯಾಗಿದೆ?

ಕಪಿನಾಯಕ : ನಿನ್ನೆ ನೀರು ಕುಡಿದಿರಬೇಕು. ಈಗ ಇದರ ಬಾಲದಂತಿರುವ ಬೇರನ್ನು ಮೇಲೆ ಮಾಡಿ ಒಣಗಲು ಬಿಡೋಣ. ನಂತರ ಬಾಯಾರುತ್ತಲೇ ನೀರು ಕುಡಿಯುತ್ತದೆ.

**ಮೂರನೆಯ ಕಪಿ** : (ಲಾಗ ಹಾಕುತ್ತಾ) ಬನ್ನಿ ಎಲ್ಲ ಬನ್ನಿ. ಗಿಡಗಳ ಬೇರನ್ನು ಮೇಲೆ ಮಾಡೋಣ

**ಕಪಿನಾಯಕ** : ಕಾಲಹರಣ ಮಾಡಬೇಡಿ. ಮೊದಲು ಎಲ್ಲ ಗಿಡಗಳ ಬೇರನ್ನು ಮೇಲೆ ಮಾಡಿ ಒಣಗಲು ಬಿಡಿ. (ಎಲ್ಲ ಕಪಿಗಳು ಗಿಡಗಳ ಬೇರನ್ನು ಮೇಲೆ ಮಾಡಲು ಹೊರಟವು)

## ದೃಶ್ಯ : ೩

(ಮಾಲಿ ಉದ್ಯಾನವನವನ್ನು ಪ್ರವೇಶಿಸುತ್ತಿದ್ದಂತೆ ಅಲ್ಲಿನ ದೃಶ್ಯ ನೋಡಿ ದುಃಖದಿಂದ)

**ಮಾಲಿ** : ಇದೇನು? ಹೀಗೇಕೆ ಒಣ ಎಲೆಗಳು ಹರಡಿವೆ. ಗಿಡಗಳು ಕಾಣುತ್ತಿಲ್ಲ (ಮುಂದೆ ನೋಡುತ್ತಾ) ಅಯ್ಯೋ! ಗಿಡಗಳ ಬೇರುಗಳನ್ನೇಕೆ ಹೀಗೆ ಮೇಲು ಮಾಡಿ ನಿಲ್ಲಿಸಿವೆ? (ಕೈಯಲ್ಲಿ ಬಾಡಿದ ಗುಲಾಬಿ ಹೂ ಹಿಡಿದು) ಗುಲಾಬಿ ಗಿಡಗಳೆಲ್ಲಾ ಕಿತ್ತುಬಿದ್ದಿವೆ? ನನ್ನ ಶ್ರಮವೆಲ್ಲಾ ವ್ಯರ್ಥವಾಯಿತು. ಈ ಕಪಿನಾಯಕನನ್ನು ನಂಬಿ ಕೆಟ್ಟೆನಲ್ಲಾ (ಕೋಪದಿಂದ) ಮಿತ್ರಾ.. ಮಿತ್ರಾ ಎಲ್ಲಿರುವೆ?

**ಮೂರನೆಯ ಕಪಿ** : **(ಓಡಿಬಂದು)** ಮಾಲಿಯಣ್ಣ, ಮಾಲಿಯಣ್ಣ(ಕೈತೋರಿಸುತ್ತಾ) ಒಡೆಯರು ಅಗೋ ಅಲ್ಲಿದ್ದಾರೆ. ಗಿಡಗಳ ಬೇರು ಬಾಲ ಗಟ್ಟಿಯಾಗಿದೆ. ಅದನ್ನು ಅವರೇ ಕೀಳುತ್ತಿದ್ದಾರೆ.

**ಮಾಲಿ** : (ಓಡುತ್ತಾ) ನಿಲ್ಲು ನಿಲ್ಲು ಏನಿದು ಹುಚ್ಚಾಟ?

**ಕಪಿನಾಯಕ** : (ಮಾಲಿಯನ್ನು ಕಂಡು) ಮಿತ್ರಾ ಈಗ ಬಂದೆಯಾ? ಬಾ ಹೇಗಿತ್ತು ಪ್ರವಾಸ?

**ಮಾಲಿ** : (ಕಪಿಯ ಕೈಯನ್ನು ಹಿಡಿದು) ಸಾಕು ನಿಲ್ಲಿಸು. ವನವನ್ನೆಲ್ಲಾ ಏಕೆ ಹಾಳು ಮಾಡಿರುವೆ? ಇದೇ ಏನು ನಿನ್ನ ಸಹಾಯ? ಹೀಗೇಕೆ ಗಿಡಗಳನ್ನು ಬೇರು ಸಹಿತ ಕಿತ್ತಿರುವೆ?

**ಕಪಿನಾಯಕ** : ಏಕೆ ಸಿಟ್ಟಾಗುವೆ ಮಿತ್ರಾ? ನೀನು ಹೇಳಿದಂತೆಯೇ ಮಾಡಿದ್ದೇವೆ. ಈ ಗಿಡಗಳು ತಮ್ಮ ಬೇರು ತೋರಿಸಲಿಲ್ಲ ಅದಕ್ಕೆ.... (ಮಾತನ್ನು ತಡೆದು)

**ಮೂರನೆಯ ಕಪಿ** : ಒಡೆಯಾ! ಮಾಲಿಯಣ್ಣ ನಮಗೆ ಬಹುಮಾನ ಕೊಡುವ ಬದಲು ಹೀಗೇಕೆ ಸಿಟ್ಟಾಗಿದ್ದಾನೆ?

**ಮಾಲಿ** : (ಅತಿಯಾದ ಕೋಪ ಹಾಗೂ ಆಯಾಸದಿಂದ) ನಿಮಗೆ ಬಹುಮಾನವೇ? (ತಲೆ ಹಿಡಿದುಕೊಂಡು ಕುಸಿದು ಬಿದ್ದ)

**ಕಪಿನಾಯಕ** : (ಗಾಬರಿಯಿಂದ) ಅಯ್ಯೋ! ಇವನಿಗೂ ಬಾಯಾರಿಕೆಯಾಗಿರಬೇಕು? ಬೇಗ ನೀರು ತನ್ನಿ ಕುಡಿಸೋಣ.

**ಒಂದನೆಯ ಕಪಿ** : (ನೀರನ್ನು ಹಿಡಿದು) ಒಡೆಯಾ ನೀರು.

(ಕಪಿನಾಯಕ ನೀರನ್ನು ಮಾಲಿಯ ಮುಖದ ಮೇಲೆ ಚಿಮುಕಿಸಿತು. ಕೂಡಲೇ ಮಾಲಿ ಮೈ ಕೊಡವಿ ಎದ್ದು ನಿಂತ)

**ಮಾಲಿ** : (ತನ್ನಷ್ಟಕ್ಕೆ ತಾನೇ ಹುಚ್ಚನಂತೆ) ಅಯ್ಯೋ! ರಾಜನಿಗೆ ಹೇಗೆ ಮುಖ ತೋರಿಸಲಿ. ಜವಾಬ್ದಾರಿಯನ್ನು ಅರಿಯದೆ ಹೊಣೆಗೇಡಿಯಾದೆನಲ್ಲಾ. ಮೇಳ ನೋಡಲು ಆಸೆಪಟ್ಟೆನಲ್ಲಾ? ಆಗಬೇಕು, ನನಗೆ ಹೀಗೆ ಆಗಬೇಕಾದದ್ದೇ !

**ಸಾಮರ್ಥ್ಯ : ಸಂವಾದ, ಚರ್ಚೆ ಹಾಗು ನಾಟಕಗಳನ್ನು ಆಲಿಸುವುದರ ಜೊತೆಗೆ ಅರ್ಥ ಮಾಡಿಕೊಳ್ಳುವುದು.**

**ಆಶಯ :** ಹೇಳಬೇಕಾಗಿರುವುದನ್ನು ಸರಿಯಾಗಿ ಹೇಳಬೇಕು. ಹೇಳಿದ್ದನ್ನು ಸರಿಯಾಗಿ ಕೇಳಿ ಅರ್ಥಮಾಡಿಕೊಂಡು ಕಾರ್ಯವನ್ನು ಮಾಡಬೇಕು. ಜವಾಬ್ದಾರಿಯನ್ನು ಒಪ್ಪಿಸುವಾಗ ಎಚ್ಚರ ಇರಬೇಕು ಎಂಬ ಅಂಶಗಳನ್ನು ವಿದ್ಯಾರ್ಥಿಗಳು ಅರಿಯಬೇಕೆಂಬುದೇ ಈ ನಾಟಕದ ಆಶಯವಾಗಿದೆ.



## ಓದಿ ತಿಳಿಯಿರಿ

ಅತ್ತಿಂದಿತ್ತ–ಆಕಡೆಯಿಂದ ಈ ಕಡೆ; ನಿಟ್ಟುಸಿರು–ನಿರಾಸೆಯಿಂದ ಬಿಡುವ ದೀರ್ಘಉಸಿರು; ಸುಳಿ–ಅಡ್ಡಾಡು; ಚೌಕ–ಕರವಸ್ತ್ರ; ಆತುರ–ಅವಸರ; ಮೊಟಕು–ಕಡಿಮೆ; ಬಾಯಾರಿಕೆ–ನೀರಡಿಕೆ; ಕಾಲಹರಣ–ವ್ಯರ್ಥವಾಗಿ ಸಮಯ ಕಳೆಯುವುದು; ನಾಯಕ–ಯಜಮಾನ; ಜವಾಬ್ದಾರಿ–ಹೊಣೆಗಾರಿಕೆ; ಜೋಪಾನ–ಎಚ್ಚರಿಕೆ;

## ಗಮನಿಸಿ ತಿಳಿಯಿರಿ

**ಮಾಲಿ** : ತೋಟದ ಕೆಲಸಮಾಡುವವ

**ಮಿತ್ರಧರ್ಮ** : ಗೆಳೆಯನಲ್ಲಿ ಇರಬೇಕಾದ ಗುಣಗಳು: ಕಷ್ಟಕಾಲದಲ್ಲಿ ಸ್ನೇಹಿತನಿಗೆ ಸಹಾಯಮಾಡುವುದು.

**ಕುಂಭಮೇಳ** : ಸೂರ್ಯ ಕುಂಭ ರಾಶಿಯನ್ನು ಪ್ರವೇಶಿಸಿದಾಗ ಪ್ರಯಾಗದ ತ್ರಿವೇಣಿ ಸಂಗಮದಲ್ಲಿ (ಗಂಗಾ, ಯಮುನಾ, ಸರಸ್ವತಿ ನದಿಗಳ ಸಂಗಮ) ಹನ್ನೆರಡು ವರ್ಷಕ್ಕೊಮ್ಮೆ ನಡೆಯುವ ಜಾತ್ರೆ.

**ಆತುರಗಾರನಿಗೆ ಬುದ್ಧಿ ಮೊಟಕು :** ಇದು ಒಂದು ಗಾದೆ ಮಾತು. ಅವಸರದಲ್ಲಿ ಕೆಲಸ ಮಾಡುವವನಿಗೆ ಬುದ್ಧಿ ಕಡಿಮೆ ಎನ್ನುವುದು ಇದರ ಅರ್ಥ.

**ಹೊಣೆಗೇಡಿ** : ಜವಾಬ್ದಾರಿಯನ್ನು ನಿರ್ವಹಿಸಲಾಗದವನು.

## ಪದ್ಯ ಆಧಾರಿತ ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

೧. ಕುಂಭಮೇಳ ಯಾವ ಊರಿನಲ್ಲಿ ನಡೆಯುತ್ತದೆ?

________________________________________

೨. ಮಾಲಿಗೆ ಕುಂಭಮೇಳ ನೋಡಲು ಯಾರು ಸಹಾಯ ಮಾಡಿದರು?

________________________________________

೩. ಗಿಡದ ಬೇರು ಎಲ್ಲಿದೆ ಎಂದು ನೋಡಲು ಕಪಿನಾಯಕ ಏನು ಮಾಡಿತು?

________________________________________

೪. ಗಿಡದ ಬೇರು ಹಸಿಯಾಗಿದೆ ಎಂದು ಹೇಳಿದವರು ಯಾರು?

________________________________________

### ಆ. ಎರಡು-ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೧. ಮಾಲಿ ಗಿಡಗಳನ್ನು ಹೇಗೆ ಜೋಪಾನ ಮಾಡಲು ತಿಳಿಸಿದ?

________________________________________

________________________________________

೨. ಮಾಲಿ ಉದ್ಯಾನವನಕ್ಕೆ ಹಿಂತಿರುಗಿದಾಗ ಕಂಡ ದೃಶ್ಯವೇನು?

________________________________________

________________________________________

೩. ಮಾಲಿ ತನ್ನನ್ನು ತಾನು ಹೇಗೆ ದೂಷಿಸಿಕೊಂಡ?

________________________________________

________________________________________

**ಇ. ಈ ಮಾತುಗಳನ್ನು ಯಾರು-ಯಾರಿಗೆ ಹೇಳಿದರು?**

೧. "ಅಯ್ಯೋ! ನನಗೆಲ್ಲಿದೆ ಆ ಭಾಗ್ಯ" ?

_______________

೨. "ಒಡೆಯಾ! ಇದೇನಿದು ? ಇದು ನಮ್ಮ ಬಾಲದಂತಿದೆ."

_______________

೩. "ನಿಲ್ಲು ನಿಲ್ಲು ಏನಿದು ಹುಚ್ಚಾಟ".

_______________

೪. "ಅಯ್ಯೋ! ರಾಜನಿಗೆ ಹೇಗೆ ಮುಖ ತೋರಿಸಲಿ."

_______________

**ಈ. ಕೆಳಗಿನ ಹೇಳಿಕೆಗಳು ಸರಿ ಇದ್ದರೆ ಸರಿ ಎಂದು, ತಪ್ಪಾಗಿದ್ದರೆ ತಪ್ಪು ಎಂದು ಬರೆಯಿರಿ.**

೧. ಆಪತ್ತಿನ ಸಮಯದಲ್ಲಿ ಸಹಾಯ ಮಾಡುವುದು ಮಿತ್ರಧರ್ಮ : _______________

೨. ಕಪಿ ನಾಯಕ ಗಿಡದೊಂದಿಗೆ ಮಾತನಾಡಿತು : _______________

೩. ಉದ್ಯಾನವನಕ್ಕೆ ಹಿಂದಿರುಗಿದ ಮಾಲಿ ಸಂತಸಗೊಂಡ : _______________

## ಸಾಮರ್ಥ್ಯ ಆಧಾರಿತ ಅಭ್ಯಾಸ

**ದೂರದರ್ಶನ ವೀಕ್ಷಣೆಯಿಂದಾಗುವ ಅನುಕೂಲ ಮತ್ತು ಅನಾನುಕೂಲಗಳನ್ನು ಕುರಿತು ತರಗತಿಯಲ್ಲಿ ಚರ್ಚಿಸಿ ಬರೆಯಿರಿ.**

_______________

_______________

_______________

_______________

_______________

_______________

_______________

_______________

## ಭಾಷಾಭ್ಯಾಸ

**ಈ ಕೆಳಗಿನ ಪದಗಳಿಗೆ ಅನ್ಯಲಿಂಗ ಪದಗಳನ್ನು ಬರೆಯಿರಿ.**

ಮಾದರಿ : ನಾಯಕ → ನಾಯಕಿ

ಹೂವಾಡಿಗ → ಹೂವಾಡಗಿತ್ತಿ

ಒಡೆಯ ________ ಗೆಳತಿ________ ಆಸೆಪಟ್ಟನು ________

ಹೋದಳು ________ ಮಾತುಗಾರ________ಹಾಡುಗಾರ________

## ಭಾಷಾ ಚಟುವಟಿಕೆ

**ಕೊಟ್ಟಿರುವ ಪದಗಳ ಅರ್ಥವನ್ನು ವಿಸ್ತರಿಸಿ ಬರೆಯಿರಿ.**

ಮಾದರಿ : **ಮಾಲಿ–ವನ ರಕ್ಷಣೆ ಮಾಡುವವನು**

ನಾಯಕ : ________________

ಶ್ರಮಿಕ : ________________

ಹೊಣೆಗೇಡಿ : ________________





# ಗದ್ಯಪಾಠ – ೮

# ಗೆಳತಿಗೊಂದು ಪತ್ರ

**ಪ್ರವೇಶಕ್ಕೆ ಮುನ್ನ :** ಯಾವುದೇ ಪತ್ರವನ್ನು ಬರೆಯುವಾಗ ಕೆಲವು ನಿರ್ದಿಷ್ಟ ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಆರಂಭ, ಸಂಬೋಧನೆ, ಒಕ್ಕಣೆ, ಮುಕ್ತಾಯ ಮೊದಲಾದ ಅಂಶಗಳಲ್ಲಿ ಬದಲಾವಣೆಗಳಿರುತ್ತವೆ. ಕಾಲಕ್ಕೆ ತಕ್ಕಂತೆ ಜನರ ಬದುಕು ಸಾಗಿದರೂ ಕೊಡು ಕೊಳ್ಳುವಿಕೆ ಹಾಗೂ ವಿಚಾರಗಳ ವಿನಿಮಯದಲ್ಲಿ ಪತ್ರ ಲೇಖನ ಮಹತ್ವದ ಸ್ಥಾನ ಪಡೆದಿದೆ.

ಇಂದ,　　　　　　　　　　　　　　　　　　　　೫ನೇ ಸೆಪ್ಟಂಬರ್ ೨೦೧೮

ಸರಳಾ ಪಿ.ಕೆ.

೭ನೇ ತರಗತಿ, ಸ.ಹಿ.ಪ್ರಾ.ಶಾಲೆ,

ಆಳಂದ, ಕಲಬುರಗಿ ಜಿಲ್ಲೆ.

ನಲ್ಮೆಯ ಗೆಳತಿ ಸಹನಾಳಿಗೆ ವಂದನೆಗಳು,

ಇಲ್ಲಿ ನಾನು ಅಭ್ಯಾಸದೊಂದಿಗೆ ಆರೋಗ್ಯವಾಗಿದ್ದೇನೆ. ನಿನ್ನ ಅಭ್ಯಾಸ, ಆರೋಗ್ಯ ಕುರಿತು ತಿಳಿಸುತ್ತಾ ಇರು. ನಿನ್ನ ಪತ್ರ ತಲುಪಿತು. ಪತ್ರದಲ್ಲಿ ನನ್ನ ಬೆಳಗಾವಿ ಜಿಲ್ಲಾ ಪ್ರವಾಸ ಕುರಿತು ಬರೆಯುವಂತೆ ತಿಳಿಸಿರುವೆ. ಓದಿ ಬಹಳ ಸಂತೋಷವಾಯಿತು.



ನಾಲ್ಕು ದಿನಗಳ ಕಾಲ ನನ್ನ ತಂದೆ ತಾಯಿ ಜೊತೆ ಬೆಳಗಾವಿಗೆ ಹೋಗಬೇಕಾದ ಆಕಸ್ಮಿಕ ಅವಕಾಶ ಬಂದಿತು. ಜಿಲ್ಲೆಯ ಪ್ರಮುಖ ಸ್ಥಳಗಳ ವೀಕ್ಷಣೆಗೆ ಆ ಸಂದರ್ಭ ಪ್ರಯೋಜನವಾಯಿತು. ಅದನ್ನೇ ಕುರಿತು ಪತ್ರ ಬರೆಯುತ್ತಿದ್ದೇನೆ.

ಬೆಳಗಾವಿ ಇದು ಪುರಾತನ ಕುಂತಳ ದೇಶದ ಭಾಗ. ಇಲ್ಲಿರುವ ಐತಿಹಾಸಿಕ ಕೋಟೆಗಳು, ಬೆಟ್ಟ, ನದಿ, ಸಂಗಮ, ಜಲಪಾತಗಳು, ನಿಸರ್ಗ ರಮಣೀಯ ಸ್ಥಳಗಳು ಪ್ರವಾಸಿಗರಿಗೆ ಆಕರ್ಷಣೀಯ ತಾಣಗಳಾಗಿವೆ. ಹಲಸಿ, ಬೈಲಹೊಂಗಲ, ಸೊಗಲ ಸೋಮೇಶ್ವರ, ರಾಮತೀರ್ಥ, ಸವದತ್ತಿ ಜಾಂಬೋಟಿ, ಕಣಕುಂಬಿ, ಯೋಗಿಹಳ್ಳ, ಶಬರಿಕೊಳ್ಳ ಹಾಗು ದೇವಗಾಂ ಇವು ಜಿಲ್ಲೆಯ ಪ್ರಮುಖ ಸ್ಥಳಗಳಾಗಿವೆ. ಈ ಪ್ರವಾಸದಲ್ಲಿ ನನಗೆ ಇಲ್ಲಿಯ ಜಲಪಾತಗಳು ಹೆಚ್ಚು ಆಕರ್ಷಣೀಯವಾಗಿದ್ದು ಗಮನ ಸೆಳೆದ ಕಾರಣ ಅವುಗಳನ್ನೇ ಕುರಿತು ಬರೆಯುತ್ತಿದ್ದೇನೆ.

ಮೊದಲಿಗೆ ನಾನು ಕರ್ನಾಟಕದ ಪ್ರಸಿದ್ಧ ಜಲಪಾತಗಳಲ್ಲಿ ಒಂದಾದ **ಗೋಕಾಕ್ ಜಲಪಾತ**ವನ್ನು ನೋಡಿದೆ. ಇದು ಗೋಕಾಕ್ ಪಟ್ಟಣದಿಂದ ೬ ಕಿ.ಮೀ.ದೂರದಲ್ಲಿದೆ. ಜಲಪಾತವನ್ನು ದಬದಬೆ,

‘ತಡಸಲು’ ಎಂತಲೂ ಕರೆಯುತ್ತಾರೆ. ಈ ಜಲಪಾತವನ್ನು ನೋಡಲು ಎರಡು ಕಣ್ಣುಗಳು ಸಾಲದು. ಘಟಪ್ರಭೆ ಇಲ್ಲಿ ಕಲ್ಲು ಬಂಡೆಗಳ ನಡುವೆ ದಾಟುತ್ತಾ, ಬಳಕುತ್ತಾ ಬರುತ್ತಾಳೆ. ಇದೊಂದು ನಯನ ಮನೋಹರ ದೃಶ್ಯ. ಕುದುರೆ ಲಾಳಾಕಾರದಲ್ಲಿ ಸುಮಾರು ೧೮೦ ಅಡಿಗಳ ಎತ್ತರದಿಂದ ಧುಮುಕುವ ನೋಟವಂತೂ ನನ್ನನ್ನು ರೋಮಾಂಚನಗೊಳಿಸಿತು. ಕರ್ನಾಟಕದ ನಯಾಗರ ಎಂದು ಕರೆಯಿಸಿಕೊಂಡು ಕಪ್ಪುಕಲ್ಲು ಬಂಡೆಗಳ ಮೇಲೆ ಹಾಲಿನಂತೆ ಬಿಳಿನೊರೆಯಾಗಿ, ತುಂತುರು ತುಂತುರಾಗಿ ಮೇಲೆದ್ದು, ಹಿಂಜಿದ ಅರಳೆಯಂತೆ ಕಾಣುವ ದೃಶ್ಯ ನನ್ನನ್ನು ಮೂಕ ವಿಸ್ಮಿತಳನ್ನಾಗಿಸಿತು. ಈ ಜಲಪಾತದ ನೆತ್ತಿಯ ಮೇಲೆ ಸುಮಾರು ೨೦೧ ಮೀಟರ್ ಉದ್ದದ ತೂಗುಸೇತುವೆ  ಇದೆ. ಅದರ ಮೇಲೆ ನಡೆದುಕೊಂಡು ಹೋಗುತ್ತ ಕೆಳಗೆ ಹರಿಯುವ ಘಟಪ್ರಭಾ ನದಿಯನ್ನು ನೋಡುವುದಂತೂ ವರ್ಣಿಸಲಾಗದ ಅನುಭವ.



ಗೋಕಾಕ್‌ನಿಂದ ಸುಮಾರು ೮ ಕಿಲೋಮೀಟರ್ ದೂರದಲ್ಲಿರುವ ಮತ್ತೊಂದು ಜಲಪಾತ ಯಾವುದು ಗೊತ್ತೆ? ಅದೆ **ಗೊಡಚಿನಮಲ್ಕಿ** ಜಲಪಾತ. ಇದು ಮಾರ್ಕಂಡೇಯ ನದಿಯಿಂದ ಉಂಟಾದುದರಿಂದ ಇದಕ್ಕೆ ಮಾರ್ಕಂಡೇಯ ಜಲಪಾತವೆಂದು ಹೆಸರಿದೆ. ಇದನ್ನು ತಲುಪಲು ಮುಖ್ಯ ರಸ್ತೆಯಿಂದ ಸುಮಾರು ೨.೫ ಕಿ.ಮೀ. ಕಾಡಿನ ಮಧ್ಯೆ ಹೋಗಬೇಕು. ಸಣ್ಣ ಪುಟ್ಟ ಸಾರಿಗೆ ವ್ಯವಸ್ಥೆ ಇದ್ದರೂ ನಾನು ನಿಸರ್ಗದ ಸೊಬಗನ್ನು ಸವಿಯಲು ನಡೆದುಕೊಂಡೇ ಹೋದೆ. ಇಲ್ಲಿ ಮಾರ್ಕಂಡೇಯ ನದಿಯು ಎರಡು ಬಾರಿ ಧುಮುಕುತ್ತದೆ. ಮೊದಲನೆಯದು ೨೫ ಮೀಟರ್, ಎರಡನೆಯದು ೧೮ ಮೀಟರ್‌ಎತ್ತರದಿಂದ ಧುಮುಕಿ ವಿಶಾಲವಾಗಿ ಹರಡಿ ಮೆಟ್ಟಿಲು ಮೆಟ್ಟಿಲುಗಳಾಗಿ ಇಳಿಯುತ್ತದೆ. ಹಾಲಿನ ನೊರೆಯನ್ನು ಸೃಷ್ಟಿಸುತ್ತಾ ಹರಿಯುವ ನೋಟ ನನ್ನ ಕಣ್ಮನ ಸೆಳೆದು ಮೈಮರೆಯುವಂತೆ ಮಾಡಿತು. ಎಷ್ಟು ನೋಡಿದರೂ ಸಾಲದೆನಿಸುವ ಈ ಜಲಪಾತ ಘೋಡಗೇರಿ ಬಳಿ ಘಟಪ್ರಭಾ ನದಿಯನ್ನು ಸೇರಿಕೊಳ್ಳುತ್ತದೆ.

ಕೊನೆಯದಾಗಿ ನೋಡಿದ ಜಲಪಾತ ಮಹಾದಾಯಿ ನದಿಯಿಂದ ಉಂಟಾದ **ವಜ್ರಪೋಹ** ಜಲಪಾತ. ಇದು ಬೆಳಗಾವಿ ನಗರದಿಂದ ಸುಮಾರು ೫೮ ಕಿ.ಮೀ. ದೂರದಲ್ಲಿದೆ. ಪಶ್ಚಿಮ ಘಟ್ಟದ ದಟ್ಟ ಹಸಿರು ಕಾಡಿನ ನಡುವೆ ಸಾಗಿ ಬರುವ ಮಹಾದಾಯಿಯನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಸುಮಾರು ೨೦೦ ಅಡಿಗಳ ಆಳಕ್ಕೆ ಧುಮುಕುವಾಗ ನಡುವೆ ಇರುವ ಬಂಡೆಗಳಿಗೆ ಅಪ್ಪಳಿಸಿ ತುಂತುರು ತುಂತುರು ಹನಿಗಳಾಗಿ ಚಿಮ್ಮುವುದು. ಪ್ರತಿಯೊಂದು ಹನಿಯ ಮೇಲೂ ತನ್ನ ಅಸ್ತಿತ್ವ

ಸ್ಥಾಪಿಸಿರುವಂತಿರುವ ರವಿ ಪ್ರತಿ ಹನಿಗೂ ವಜ್ರದ ಕಾಂತಿಯನ್ನು ತುಂಬುತ್ತಾನೆ. ಇಲ್ಲಿ ಸಹಸ್ರ ಹನಿಗಳು ವಜ್ರದಂತೆ ಫಳಫಳ ಹೊಳೆಯುತ್ತವೆ. ಈ ಕಾರಣದಿಂದ ಇದನ್ನು ವಜ್ರಪೋಹ ಜಲಪಾತವೆಂದು ಕರೆಯುವರು. ಇದು ಚಿತ್ತಾಕರ್ಷಕ ಸುಂದರ ಕಾಮನಬಿಲ್ಲನ್ನು ಸೃಷ್ಟಿಸಿ ನಿಸರ್ಗದ ಸೊಬಗಿಗೆ ಸರಿಸಮ ಮತ್ತೊಂದಿಲ್ಲ ಎಂಬಂತೆ ಅಚ್ಚರಿಯನ್ನುಂಟು ಮಾಡುತ್ತದೆ. ಈ ಜಲಪಾತದ ಸುಂದರ ನೋಟವನ್ನು ಎಷ್ಟು ಸಲ ನೋಡಿದರೂ ಮತ್ತೆ ಮತ್ತೆ ನೋಡಬೇಕೆನಿಸುತ್ತದೆ.

ಈ ಜಲಪಾತಗಳ ನಿಸರ್ಗದ ಸವಿನೋಟವನ್ನು ನೋಡಿ ಮನಸ್ಸು ನವಿಲಿನಂತೆ ಗರಿಗೆದರಿ ಕುಣಿದಾಡಿ ವರ್ಣಿಸಲಾಗದ ಆನಂದವನ್ನು ಉಂಟು ಮಾಡಿತು.

ನಮ್ಮ ಕನ್ನಡ ನಾಡಿನಲ್ಲಿ ಇನ್ನೂ ಅನೇಕ ಪ್ರಸಿದ್ಧ ಜಲಪಾತಗಳಿವೆ. ಅವಕಾಶ ಸಿಕ್ಕಾಗ ಅವುಗಳನ್ನು ಒಟ್ಟಾಗಿ ಜೊತೆಯಾಗಿಯೇ ವೀಕ್ಷಿಸೋಣ ಎಂದು ಆಶಿಸುತ್ತ ಪತ್ರ ಮುಗಿಸುತ್ತೇನೆ.

ಇಂತಿ ನಿನ್ನ ಗೆಳತಿ

ಸರಳಾ ಕೆ.

ಇವರಿಗೆ,

ಕು॥ಸಹನಾ ಎಂ.

೭ನೇ ತರಗತಿ, ಅ ವಿಭಾಗ,

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ,

ರಾಯಚೂರು



**ಸಾಮರ್ಥ್ಯ : ಅನೌಪಚಾರಿಕ ಪತ್ರ ಮತ್ತು ಚಿಕ್ಕ ಪ್ರಬಂಧಗಳನ್ನು ಸ್ವತಂತ್ರವಾಗಿ ಬರೆಯುವುದು.**

**ಆಶಯ :** ತೀವ್ರಗತಿಯ ಬದಲಾವಣೆಗೆ ಮೈ ಒಡ್ಡಿರುವ ಆಧುನಿಕತೆಯ ವಿದ್ಯಮಾನವು ಅಂತರ್ಜಾಲದ ಸೆಳವಿನಲ್ಲಿ ಸಿಕ್ಕಿಹೋಗಿ ವಿಚಾರ ವಿನಿಮಯಕ್ಕೆ ಹಲವು ಪರ್ಯಾಯ ಮಾರ್ಗಗಳಿಂದ ಚಿಂಬಿತಗೊಂಡಿವೆ. ಒಂದಾನೊಂದು ಕಾಲದಲ್ಲಿ ಸುದ್ದಿ ಸಮಾಚಾರಕ್ಕೆ ಪ್ರಮುಖ ವ್ಯವಸ್ಥೆಯಾಗಿದ್ದ ಪತ್ರ ವ್ಯವಹಾರವು ಮೊಬೈಲ್, ಫ್ಯಾಕ್ಸ್, ಎಸ್.ಎಮ್.ಎಸ್. ಬಳಕೆಯಿಂದ ಕಡಿಮೆಯಾಗುತ್ತಿದೆ. ಸುದೀರ್ಘ ಇತಿಹಾಸ ಹೊಂದಿದ ಪತ್ರ ವ್ಯವಹಾರದ ವ್ಯವಸ್ಥೆಯನ್ನು ಉಳಿಸಿಕೊಳ್ಳಲು ಅದರ ಪರಿಚಯ ಮಾಡುವುದು ಮಹತ್ವದ ಸಂಗತಿಯಾಗಿದೆ. ಇದರ ನೈಜ ಬಳಕೆ ನಿರಂತರವಾಗಿರಲಿ ಎಂಬುದು ಇಲ್ಲಿಯ ಆಶಯ.

## ಓದಿ ತಿಳಿಯಿರಿ

ಜಲಪಾತ–ಎತ್ತರದಿಂದ ಬೀಳುವ ನೀರು; ಆಕಸ್ಮಿಕ–ಹಠಾತ್ತಾದ; ಐತಿಹಾಸಿಕ–ಇತಿಹಾಸಕ್ಕೆ ಸಂಬಂಧಿಸಿದ; ಸಂಗಮ–ಸೇರುವಿಕೆ; ತಾಣ–ಸ್ಥಳ; ರೋಮಾಂಚನ–ಪುಳಕ; ತುಂತುರು–ಸಣ್ಣ ಹನಿ; ವಿಶಾಲ–ಅಗಲ; ದೃಶ್ಯ–ನೋಟ; ನೊರೆ–ಬುರುಗು; ಅಚ್ಚರಿ–ಆಶ್ಚರ್ಯ; ರಮಣೀಯ–ಸುಂದರವಾದ; ನಿಸರ್ಗ–ಪ್ರಕೃತಿ

## ಗಮನಿಸಿ ತಿಳಿಯಿರಿ

ಮೂಕ ವಿಸ್ಮಿತ : ಅಚ್ಚರಿಯಿಂದ ಮಾತುಬಾರದಿರುವುದು

ಚಿತ್ತಾಕರ್ಷಕ : ಮನಸ್ಸನ್ನು ಸೂರೆಗೊಳ್ಳುವ

ಗರಿಗೆದರಿ ಕುಣಿ : ಗರಿಬಿಚ್ಚಿ ಕುಣಿಯುವುದು

ನಯನ ಮನೋಹರ : ಕಣ್ಣಿಗೆ ಸುಂದರವಾಗಿ ಕಾಣುವುದು

## ಪಠ್ಯ ಆಧಾರಿತ ಅಭ್ಯಾಸ

### ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

೧. ಈ ಪತ್ರವನ್ನು ಯಾರು ಯಾರಿಗೆ ಬರೆದಿದ್ದಾರೆ?

_______________

೨. ಜಲಪಾತಕ್ಕೆ ಇರುವ ವಿವಿಧ ಹೆಸರುಗಳಾವುವು?

_______________

೩. ಗೋಕಾಕ ಜಲಪಾತ ಏನೆಂದು ಕರೆಸಿಕೊಂಡಿದೆ?

_______________

೪. ಗೊಡಚಿನಮಲ್ಕಿ ಜಲಪಾತಕ್ಕೆ ಇರುವ ಇನ್ನೊಂದು ಹೆಸರೇನು?

_______________

೫. ವಜ್ರಪೋಹ ಜಲಪಾತ ಯಾವ ನದಿಯಿಂದ ಉಂಟಾಗಿದೆ?

_______________



### ಆ) ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ.

೧. ಬೆಳಗಾವಿ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು ಯಾವುವು?

_______________

_______________

೨. ಗೊಡಚಿನಮಲ್ಕಿ ಜಲಪಾತಕ್ಕೆ ಮಾರ್ಕಂಡೇಯ ಜಲಪಾತವೆಂದು ಹೆಸರು ಬರಲು ಕಾರಣವೇನು?

_______________

_______________

೩. ಮಹದಾಯಿ ನದಿಯನ್ನು ನೋಡುವುದು ಕಣ್ಣಿಗೆ ಹಬ್ಬ ಹೇಗೆ?

______________________________

______________________________

## ಇ) ಸ್ವಂತ ವಾಕ್ಯದಲ್ಲಿ ಉಪಯೋಗಿಸಿ.

ನಯನಮನೋಹರ : ______________________________

ಕಣ್ಮನಸೆಳೆ : ______________________________

ಮೂಕವಿಸ್ಮಿತ : ______________________________

## ಈ) ಸರಿಯಾಗಿ ಹೊಂದಿಸಿ ಬರೆಯಿರಿ.

| ಅ | ಬ | |
|---|---|---|
| ೧. ವಜ್ರಪೋಹ | ಅ) ಪುರಾತನ ಕುಂತಳ | : ____________ |
| ೨. ಬೆಳಗಾವಿ | ಆ) ಮಾರ್ಕಂಡೇಯ | : ____________ |
| ೩. ಗೊಡಚಿನಮಲ್ಕಿ | ಇ) ಕುಣಿದಾಡು | : ____________ |
| ೪. ಹಾಲಿನ | ಈ) ಹಾಡು | : ____________ |
| ೫. ನವಿಲಿನಂತೆ | ಉ) ಮಹಾದಾಯಿ | : ____________ |
| | ಊ) ನೊರೆ | : ____________ |



## ಸಾಮರ್ಥ್ಯ ಆಧಾರಿತ ಅಭ್ಯಾಸ

## ಅ) ನೀವು ಸಾಕುವ ಒಂದು ಪ್ರಾಣಿಯ ಬಗ್ಗೆ ೫–೬ ವಾಕ್ಯಗಳಲ್ಲಿ ಬರೆಯಿರಿ.

______________________________

______________________________

______________________________

______________________________

______________________________

## ಭಾಷಾಭ್ಯಾಸ

ಅ) **ಕೆಳಗಿನ ಪದಗಳನ್ನು ನಾಮಪದವಾಗಿಯೂ, ಕ್ರಿಯಾಪದವಾಗಿಯೂ ಬಳಸಿ ವಾಕ್ಯವನ್ನು ರಚಿಸಿರಿ.**

**ಮಾದರಿ :** ಸಾರು : ಸಾರು → (ನಾಮಪದ), ಸಾರು, (ಕ್ರಿಯಾಪದ)

ವಾಕ್ಯ : ನನಗೆ ಬೇಳೆಸಾರು ಎಂದರೆ ತುಂಬಾ ಇಷ್ಟ.

ಸಾರು : (ಕ್ರಿಯಾಪದ) ಘೋಷಿಸು.

ವಾಕ್ಯ : ಊರಿನಲ್ಲಿ ಢಂಗೂರ ಸಾರು.

ಬರೆ : ____________________

____________________

ಹರಿ : ____________________

____________________

ಕುಣಿ : ____________________

____________________

ಕಾಡು : ____________________

____________________

## ಭಾಷಾ ಚಟುವಟಿಕೆ

ಅ) **ಈ ಕೆಳಗಿನ ಪದಗಳನ್ನು ಕ್ರಮಬದ್ಧವಾಗಿ ಜೋಡಿಸಿ ಬರೆಯಿರಿ.**

೧. ಹಾಲು ಬೆಳದಿಂಗಳು ಹರಡಿತ್ತು ಚೆಲ್ಲಿದಂತೆ.

____________________

೨. ಉರುಳಿ ಗಾಳಿಗೆ ಎಲ್ಲ ಬಿದ್ದವು ಮರಗಳು.

____________________

೩. ಹೋದರು ಧರಿಸಿ ಮಕ್ಕಳು ಶಾಲೆಗೆ ಸಮವಸ್ತ್ರಗಳನ್ನು

____________________

ಆ) **ಪದ ಸ್ವರೂಪ ಬದಲಿಸಿ ವಾಕ್ಯ ರಚಿಸಿರಿ.**

**ಮಾದರಿ :** ನಾನು ಮನೆ ಹೋಗು

ನಾನು ಮನೆಗೆ ಹೋಗುತ್ತೇನೆ.

೧. ಮೇರಿ ಹಾಲು ಕುಡಿ. : ____________________

೨. ಮಮ್ತಾಜ್ ಶಾಲೆ ಬರು : ______________________

೩. ಶಿಕ್ಷಕ ಮನೆಗೆಲಸ ನೀಡು : ______________________

೪. ಗಾಳಿ ಜೋರು ಬೀಸು : ______________________

**ಇ) ಕೆಳಗಿನ ಮಾದರಿಯಂತೆ ಬರೆಯಿರಿ.**

**ಮಾದರಿ:** ಇತಿಹಾಸ – ಐತಿಹಾಸಿಕ

೧. ಭೂಗೋಳ : ______________________

೨. ಪುರಾಣ : ______________________

೩. ನೀತಿ : ______________________

**ಚಟುವಟಿಕೆ**

೧. ನೀವು ಪ್ರವಾಸದಲ್ಲಿ ಸಂದರ್ಶಿಸಿದ ಸ್ಥಳಗಳ ಹೆಸರನ್ನು ಪಟ್ಟಿಮಾಡಿ.

೨. ಮೂಗೂರು ಮಲ್ಲಪ್ಪರವರ **ಜೋಗದ ಗುಂಡಿ** ಪದ್ಯವನ್ನು ಕಲಿತು ಹಾಡಿ.



## ಪೂರಕ ಓದು

# ಮಾತು ಮತ್ತು ಮೌಲ್ಯ

ಶಾಲೆಯಲ್ಲಾಗಲಿ, ಸಭೆ ಸಮಾರಂಭಗಳಲ್ಲಾಗಲಿ ಹರಿದಾಡುವ ನೀತಿ ಮಾತುಗಳು ಆ ಸಂದರ್ಭಕ್ಕೆ ಸೀಮಿತವಾಗುತ್ತವೆ. ಜೀವನದ ಆಚರಣೆಗಳಲ್ಲಿ ಬೇರೊಂದನ್ನು ಕಾಣುತ್ತೇವೆ. ವೈಯಕ್ತಿಕ ಲಾಭಕ್ಕಾಗಿ ಸತ್ಯಾಚರಣೆಗಳು ಮೂಲೆ ಗುಂಪಾಗುತ್ತವೆ. ಸಾಮಾಜಿಕ ಸ್ವಾಸ್ಥ್ಯ ಕೆಡುತ್ತಿದೆ. ಮಾತಿಗೆ ಉಪದೇಶಗಳಿಗೆ ಈಗ ಬೆಲೆ ಇಲ್ಲದಾಗಿದೆ. ಹಾಗಾಗಬಾರದು ಸತ್ಯ ಶುದ್ಧ ಆಚರಣೆ ನಮ್ಮದಾಗಬೇಕು. ಅಂಥ ಒಂದು ಬದುಕಿನ ಯಶೋಗಾಥೆಯನ್ನು ಇಲ್ಲಿ ತಿಳಿಯೋಣ

೧

ಅಥರ್ಗಾ ಎಂಬುದು ಒಂದು ಗ್ರಾಮ, ಇದು ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನಲ್ಲಿದೆ. ಅಲ್ಲೊಂದು ಗುಡಿ. ಊರ ಜನರ ದೈನಂದಿಕ ಚಟುವಟಿಕೆ ಪ್ರಾರಂಭಗೊಳ್ಳುವುದು ಈ ಗುಡಿಯಲ್ಲಿಯ ಮೂರ್ತಿಯ ದರ್ಶನದ ನಂತರವೆ. ಹೆಂಗಳೆಯರೆಲ್ಲ ಕಾಯಿ ಕರ್ಪೂರದೊಂದಿಗೆ ಗುಡಿಗೆ ಹೋಗಿ ತಮ್ಮ ಮಕ್ಕಳ ಉಜ್ವಲ ಶಿಕ್ಷಣಕ್ಕಾಗಿ ಭಕ್ತಿಯಿಂದ ಬೇಡಿಕೊಳ್ಳುತ್ತಾರೆ. ಪ್ರದಕ್ಷಣೆ ಹಾಕುತ್ತಾರೆ. ಉರುಳು ಸೇವೆ ಮಾಡುತ್ತಾರೆ.

ಈ ಮೊದಲು ಅಥರ್ಗಾ ಒಂದು ಕೊಂಪೆ. ಅನಕ್ಷರತೆಯ ತವರು ಹಾಗೂ ದುರ್ಗುಣಗಳ ಬೀಡಾಗಿತ್ತು. ರೇವಣಸಿದ್ದಪ್ಪ ಮಾಸ್ತರರ ಆಗಮನದಿಂದ ಕೊಂಪೆ ಸಂಪಿಗೆಯಾಯಿತು. ಜನರನ್ನು ತಿದ್ದಿದರು–ತೀಡಿದರು. ದುಡಿಯಲು ಶಕ್ತಿ ನೀಡಿದರು. ಕತ್ತಲಿದ್ದ ಮನೆಗೆ ಬೆಳಕು ತಂದರು. ಈ ಬಗೆಗೆ ಇಂದಿಗೂ ಹಿರಿಯರು ಹಾಗೂ ವೃದ್ಧರು ಹಾಡಿ ಹೊಗಳುತ್ತಾರೆ.

ಅವರು ಮಾಡಿ ತೋರಿಸಿದ್ದು ಒಂದೇ ಎರಡೇ ! ಗ್ರಾಮಸುಧಾರಣೆ, ಯುವಕರಿಗೆ ಮಾರ್ಗ ದರ್ಶನ, ಕೃಷಿಯಲ್ಲಿ ಉತ್ತೇಜನ, ಮೂಢನಂಬಿಕೆ ವಿರುದ್ಧ ತಿಳುವಳಿಕೆ, ಗುಡಿ ಕೈಗಾರಿಕೆ ಬಗ್ಗೆ ಕಲ್ಪನೆಮೂಡಿಸಿದರು. ಹೆಣ್ಣುಮಕ್ಕಳ ಸಮಾನತೆ, ಮಧ್ಯವ್ಯಸನಿಗಳನ್ನು ವ್ಯಸನಮುಕ್ತರನ್ನಾಗಿಸಿದ್ದು ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಇದರಿಂದ ಈ ಗ್ರಾಮ ಮಾದರಿ ಗ್ರಾಮವಾಯಿತು. ಗ್ರಾಮಕ್ಕೆ ಸೌಕರ್ಯಗಳು ಬರಲಾರಂಭಿಸಿದವು, ವ್ಯಾಜ್ಯಗಳು ನ್ಯಾಯಕಟ್ಟೆಯಲ್ಲಿಯೇ ತೀರ್ಮಾನ ಗೊಳ್ಳುತ್ತಿದ್ದವು. ಹೀಗೆ ಮಾಸ್ತರರು ಜನಸೇವೆಯಲ್ಲಿಯೇ ಕೊನೆಯುಸಿರೆಳೆದರು.

ಈಗ ಊರ ಮಧ್ಯದಲ್ಲಿಯೇ ಈ ಸಮಾಜಮುಖಿ ಮಾಸ್ತರರಿಗೊಂದು ಗುಡಿ. ಮಾಸ್ತರರ ಆಳೆತ್ತರದ ಪ್ರತಿಮೆ ಸ್ಥಾಪನೆಗೊಂಡಿತು. ನಿತ್ಯ ಎರಡು ಬಾರಿ ಪೂಜೆ. ಅದಕ್ಕೊಬ್ಬ ಅರ್ಚಕ. ಈ ಶಿಕ್ಷಕರಿಗಾಗಿ ಪ್ರತಿ ವರ್ಷ ಶಿವರಾತ್ರಿಯಂದು ಭಾರಿ ಜಾತ್ರೆ ನಡೆಯುತ್ತದೆ. ಮಾಸ್ತರರ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಮಾಡುತ್ತಾರೆ. ಇಡೀ ರಾತ್ರಿ ಭಜನೆ, ಕೀರ್ತನೆ ನಡೆಯುತ್ತದೆ. "ಊರವರು ನಾವು ಮಾಸ್ತರರ ಜಾತ್ರೆ ಮಾಡ್ತೀವಿ. ಅವ್ರನ್ನ ನಾವು ದೇವರಂತ ನಂಬಿವ್ರಿ" ಎಂದು ಹೆಮ್ಮೆಯಿಂದ ಹೇಳುತ್ತಾರೆ.



"ಗುರುಬ್ರಹ್ಮ! ಗುರುವಿಷ್ಣು! ಗುರುದೇವೋ ಮಹೇಶ್ವರ" ಎಂಬ ಆರ್ಯೋಕ್ತಿ ಈ ದಿನಗಳಲ್ಲಿ ಸವಕಲಾಗಿದೆ. ಆದರೆ ಇಲ್ಲಿ ಈ ಮಾತುಗಳು ಜೀವಂತವಾಗಿದೆ. ಇದು ಸಾಮಾಜಿಕ ಮೌಲ್ಯದ ಪ್ರತೀಕವಲ್ಲವೇ?




ಒಂದು ಸಮಾರಂಭಕ್ಕೆ ರಾಜ್ಯದ ದೊಡ್ಡ–ದೊಡ್ಡವರನ್ನು ಆಹ್ವಾನಿಸಲಾಗಿತ್ತು. ನಿಗದಿತ ಸಮಯ ೧೦–೩೦. ದೊಡ್ಡವರು ಬರುವುದೆಂದರೆ ಕೇಳಬೇಕೇ? ಎಲ್ಲರಿಗೂ ಸಮಯಕ್ಕೆ ಸರಿಯಾಗಿ ಬರಲೆಂದು ಸೂಚಿಸಲಾಗಿತ್ತು. ಕಾರ್ಯಕ್ರಮದಂದು ಎಲ್ಲರೂ ಸರಿಯಾದ ಸಮಯಕ್ಕೆ ಬಂದು ಕುಳಿತರು. ವಿದ್ಯಾರ್ಥಿಗಳು ಸಹ ಕಾಯ್ದಿದ್ದರು. ದೊಡ್ಡವರು ಬಂದರು. ಆದರೆ ಸಮಯ ೧೨ ಗಂಟೆ! ದೊಡ್ಡವರು ಉದ್ಬೋಧಕ ಭಾಷಣ ಮಾಡಿ "ಶಿಕ್ಷಕರೆಂದರೆ ಸಮಾಜದ ಶಿಲ್ಪಿಗಳು, ಮಕ್ಕಳು ಭವ್ಯಭಾರತದ ನಾಳಿನ ಸತ್ಪ್ರಜೆಗಳು. ಇಂದು ಸಾಮಾಜಿಕ ಮೌಲ್ಯಗಳು ಕುಸಿಯುತ್ತಿವೆ. ಸಮಯ

ಪಾಲನೆ, ಕರ್ತವ್ಯ ನಿಷ್ಠೆ ಹಾಗೂ ಪ್ರಾಮಾಣಿಕತೆಗೆ ಹೆಚ್ಚಿನ ಗಮನ ನೀಡಬೇಕೆಂದರು. ಇಂದಿನ ಸಮಾಜದ ಕೆಡಕುಗಳಿಗೆ ನೀವೇ ಹೊಣೆ ಎಂದು ಅಪ್ಪಣೆ ನೀಡಿದರು. ಸಭೆ ಮೌನವಾಯಿತು. ಆಗ ದೊಡ್ಡ ಹುಡುಗನೊಬ್ಬ ಎದ್ದು ನಿಂತು, 'ಸ್ವಾಮಿ ಇದರಲ್ಲಿ ತಮ್ಮ ಪಾಲು ಇದೆ' ಎನ್ನಬೇಕೆ? ಹಿರಿಯರು ದುರಗುಟ್ಟಿ ನೋಡಿದರು, ಮರು ಮಾತಾಡಲಿಲ್ಲ. ಎದ್ದು ಹೋದರು. ಇದೇ ಮಾತಿಗೂ ಮತ್ತು ಮೌಲ್ಯಕ್ಕಿರುವ ಅಂತರ. ಸಭೆ ಕಸಿವಿಸಿಗೊಂಡಿತು.

ವಚನಕಾರರು ನುಡಿದಂತೆ ನಡೆದರೆ ಇದೆ ಜನ್ಮ ಕಡೆ ಎನ್ನುತ್ತಾರೆ. ಮೌಲ್ಯಗಳನ್ನು ಮೈಗೂಡಿಸಿಕೊಂಡರೆ ಉಚಿತ–ಅನುಚಿತ, ಅವಶ್ಯ–ಅನವಶ್ಯ ಮೊದಲಾದ ಆಚಾರ ವಿಚಾರಗಳ ತಿಳುವಳಿಕೆ ಬರುತ್ತದೆ. ಅದು ರೂಢಿಗತವಾದಾಗ ಜಾತ್ಯತೀತತೆ, ಸಮಾನತೆ, ಪರಿಸರ ರಕ್ಷಣೆ, ವೈಜ್ಞಾನಿಕ ಮನೋಭಾವದ ಅಳವಡಿಕೆ, ಸತ್ಯಾನ್ವೇಷಣೆ ಫಲಿಸಿ ಮನುಷ್ಯ ಸಮಷ್ಟಿ ಶಕ್ತಿಯಾಗುತ್ತಾನೆ. ಶಿಕ್ಷಣ ಎಂದರೆ ಇದೇ ತಾನೆ?

– ಚಿದ್ರೆ ಶಂಕರಯ್ಯ ಸ್ವಾಮಿ.

**ಪ್ರಶ್ನೆಗಳು**

೧. ರೇವಣಸಿದ್ದಪ್ಪ ಮಾಸ್ತರರು ಅಥರ್ಗಾ ಗ್ರಾಮವನ್ನು ಹೇಗೆ ಮಾದರಿ ಗ್ರಾಮವನ್ನಾಗಿ ಮಾಡಿದರು?

೨. ಮಾತು ಮತ್ತು ಮೌಲ್ಯಕ್ಕಿರುವ ಅಂತರವನ್ನು ಸಮಾರಂಭ ನಿರೂಪಿಸಿದ ಬಗೆ ಹೇಗೆ?

# ಪಠ್ಯಾಧಾರಿತ ಪದಕೋಶ

## ಅ

ಅನುಕೂಲ – ಸೌಕರ್ಯ, ಶ್ರೀಮಂತಿಕೆ
ಅಪಚಾರ – ಅಗೌರವ, ವಿರುದ್ಧವಾದಆಚರಣೆ
ಅಪ್ಪಳಿಸು – ಜೋರಾಗಿತಾಗು, ತಟ್ಟು, ಬಡಿ,
ಅಮೂಲ್ಯ – ಬೆಲೆಕಟ್ಟಲಾಗದ, ಬೆಲೆಯುಳ್ಳ
ಅರಳೆ – ಕಾಳು ತೆಗೆದ ಹತ್ತಿ
ಅಲೆ – ತೆರೆ, ತರಂಗ, ಸಂಚರಿಸು, ಗುರಿಯಿಲ್ಲದೆ ತಿರುಗಾಡು
ಅಸ್ತಿತ್ವ – ಇರುವಿಕೆ
ಅಸುರ – ದಾನವ ದೈತ್ಯ, ರಾಕ್ಷಸ
ಅಸೀಮ – ಎಲ್ಲೆಯಿಲ್ಲದ, ಮೇರೆಯಿಲ್ಲದ,

## ಆ

ಆಕರ್ಷಣೀಯ – ಮನಸೆಳೆಯುವಂತಹ
ಆಕ್ರಮಣ – ದಾಳಿ ನಡೆಸುವುದು,
ಆಜ್ಞೆ – ನಿರ್ದೇಶನ, ತೀರ್ಪು
ಆಹ್ವಾನಿಸು – ಕರೆಯುವಿಕೆ

## ಇ

ಇಚ್ಛೆ – ಅಪೇಕ್ಷೆ, ಆಸೆ, ಅಭಿಪ್ರಾಯ, ಸಮ್ಮತಿ, ಮನಬಂದ ರೀತಿ

## ಉ

ಉಪದೇಶ – ಬೋಧಿಸುವುದು, ಹಿತವನ್ನು ಹೇಳುವುದು, ಬುದ್ಧಿವಾದ
ಉಪಾಯ – ಯುಕ್ತಿ, ಹಂಚಿಕೆ

## ಒ

ಒಡಲು – ದೇಹ, ಶರೀರ, ಹೊಟ್ಟೆ
ಒಬ್ಬಂಟಿ – ಏಕಾಂಗಿ, ಏಕಾಕಿ
ಒಲವು – ಪ್ರೀತಿ, ಮೋಹ, ಆಸರೆ, ಶ್ರದ್ಧೆ

## ಓ

ಓಲೈಸು – ಒಪ್ಪುವಂತೆ ಮಾಡು

## ಕ

ಕಳವಳ – ತಳಮಳ, ಕಸಿವಿಸಿ ಗೊಂದಲ, ಭ್ರಾಂತಿ
ಕಾಂತಿ – ಹೊಳಪು, ಬೆಳಕು
ಕಿಲೋವ್ಯಾಟ – ವಿದ್ಯುತ್ ಪ್ರವಾಹದ ಅಳತೆಯ ಮಾನ
ಕೌಶಲ – ಕುಶಲತೆ, ಚತುರತೆ, ಸುಖ, ಕ್ಷೇಮ

## ಗ

ಗಾಬರಿ – ಹೆದರಿಕೆ, ಅಂಜಿಕೆ
ಗೋವು – ಆಕಳು, ಹಸು

## ಘ

ಘಟ್ಟ – ಬೆಟ್ಟಗಳ ಸಾಲು, ಹಂತ, ಅವಸ್ಥೆ, ಸೋಪಾನ, ಮೆಟ್ಟಿಲು

## ಚ

ಚಾಣಾಕ್ಷ – ಸೂಕ್ಷ್ಮದೃಷ್ಟಿಯುಳ್ಳವನು
ಚಿತ್ತ – ಮನಸ್ಸು, ಗುರಿ, ಉದ್ದೇಶ, ಒಂದು ನಕ್ಷತ್ರದ ಹೆಸರು, ಒಂದು ಮಳೆಯ ಹೆಸರು

ಚಿಮ್ಮು – ರಭಸವಾಗಿ ನೆಗೆ, ಹಾರು, ತಳ್ಳು, ಎಸೆ

### ತ

ತಂತ್ರ – ಉಪಾಯ, ಪ್ರಯೋಗ ವಿಧಾನ, ಇಂದ್ರಜಾಲ ವಿದ್ಯೆ, ಸಾಹಿತ್ಯ ನಿರ್ಮಾಣ ಕೌಶಲ

ತಂಪು – ಶೀತ, ಶೈತ್ಯ, ತೃಪ್ತಿ

ತಕ್ಷಣ – ಕೂಡಲೇ, ಈಗಲೇ

ತೀರ್ಮಾನಿಸು – ನಿರ್ಣಯಕ್ಕೆ ಬರು, ನಿರ್ಧರಿಸು, ತೀರ್ಪುಕೊಡು

ತೇಜಸ್ವಿ – ಸತ್ವಶಾಲಿ, ಘನತೆಯುಳ್ಳವನು

ತೇಜಸ್ಸು – ಹೊಳಪು, ಕಾಂತಿ, ಘನತೆ, ಗೌರವ, ಸೂರ್ಯ, ಗಾಳಿ, ಹರಿತ, ಬೆಂಕಿ

### ದ

ದರ್ಬಾರು – ಒಡ್ಡೋಲಗ, ಅಧಿಕಾರ ನಡೆಸುವಿಕೆ, ಠೀವಿ, ವೈಭವ

ಧುಮುಕು – ಭರದಿಂದ ನುಗ್ಗು, ಮೇಲಿಂದ ಕೆಳಕ್ಕೆ ನೆಗೆ, ಜಿಗಿ, ಹಾರು

ದಿವ್ಯ – ಶ್ರೇಷ್ಠವಾದ, ಸಾಕ್ಷ್ಯಾಧಾರ ಗಳಿಲ್ಲದಾಗ ಅಪರಾಧಗಳನ್ನು ನಿರ್ಣಯಿಸಲು ನಡೆಸುವ ೭ ಬಗೆಯ ಉಗ್ರ ಪರೀಕ್ಷೆಗಳು

ದೈತ್ಯ – ಅಸುರ, ರಾಕ್ಷಸ

### ನ

ನಲ್ಮೆ – ಪ್ರೀತಿ, ಸ್ನೇಹ

ನಯನ – ಕಣ್ಣು, ದೃಷ್ಟಿ, ನೇತ್ರ

ನಾಯಕ – ಮುಖಂಡ, ನೇತಾರ, ಒಂದು ಜನಾಂಗದ ಹೆಸರು

ನಿಘಂಟು – ಶಬ್ದಾರ್ಥಗಳನ್ನೊಳಗೊಂಡ ಗ್ರಂಥ, ಪದಕೋಶ, ಶಬ್ದಕೋಶ

ನಿಶ್ಚಲ – ಅಚಲ, ಚಲಿಸದೇ ಇರುವ

ನಿಸರ್ಗ – ಪರಿಸರ, ಪ್ರಕೃತಿ, ಸ್ವಭಾವ, ಸೃಷ್ಟಿ

ನಿಸ್ಸೀಮ – ಬಹಳ ಚತುರ

ನೀರಾವರಿ – ವ್ಯವಸಾಯಕ್ಕೆ ನೀರೊದಗಿಸುವುದು

### ಪ

ಪಂಡಿತ – ಜ್ಞಾನಿ, ವೈದ್ಯ

ಪರಿಚಯ – ಗುರುತು, ಸಲಿಗೆ

ಪರಿಹಾರ – ನಿವಾರಣೆ, ಹೋಗಲಾಡಿಸುವುದು

ಪ್ರಕಟ – ಬಹಿರಂಗವಾಗು, ಸ್ಪಷ್ಟವಾದ

ಪ್ರಯೋಗಿಸು – ಉಪಯೋಗಿಸು, ಬಳಸು

ಪ್ರಾಣಧಾರಣೆ – ಜೀವಧರಿಸು

ಪುನಃ – ತಿರುಗಿ, ಮತ್ತೆ

### ಬ

ಬಂಡು – ಮಕರಂದ, ಮಧು, ದಂಗೆ, ಬಂಡಾಯ

ಬಲ – ಶಕ್ತಿ, ಸಾಮರ್ಥ್ಯ, ಸೈನ್ಯ, ದಂಡು

ಬಳುಕು – ಅತ್ತಿತ್ತ ಅಲೆದಾಡು, ತೂಗಾಡು

ಬುದ್ಧಿಮಾಂದ್ಯ– ಬುದ್ಧಿ ಭ್ರಮಣೆ

## ಮ

ಮಾರ್ಗ – ದಾರಿ, ಪಥ

ಮನೋಹರ – ಸುಂದರ, ರಮಣೀಯ, ಚೇತೋಹಾರಿ

ಮೇಲು – ಎತ್ತರದಭಾಗ, ಉತ್ತಮವಾದುದು.

ಮೇಧಾವಿ – ಕುಶಾಗ್ರಮತಿ, ಬುದ್ಧಿವಂತ

ಮೋಡ – ಮುಗಿಲು, ಬಾನು

## ಯ

ಯುಕ್ತಿ – ಉಪಾಯ, ತಂತ್ರ, ಸಮಯೋಚಿತ ಜ್ಞಾನ, ಬುದ್ಧಿವಂತಿಕೆ

## ರ

ರಾಜ್ಯಭಾರ – ಆಳ್ವಿಕೆ, ಆಡಳಿತ

## ಲ

ಲಾವಣಿ – ಜನಪದ ಹಾಡುಗಳ ಒಂದು ಪ್ರಕಾರ

ಲಾಳ – ಕುದುರೆ, ಎತ್ತುಗಳ ಗೊರಸಿಗೆ ಬಿಗಿಯುವ ಕಬ್ಬಿಣದ ರಕ್ಷೆ

ಲೀಲಾಜಾಲ – ಅತ್ಯಂತ ಸುಲಭವಾದ, ನಿರಾಯಾಸವಾದ

ಲೇಖನ ಚಿಹ್ನೆಗಳು – ಬರವಣಿಗೆಯಲ್ಲಿ ಬಳಸುವ ಬರಹ ಚಿಹ್ನೆಗಳು

## ವ

ವರ್ಣ – ಜಾತಿ, ವರ್ಗ, ಅಕ್ಷರ, ಸ್ತುತಿ ಹೊಗಳಿಕೆ

ವಿಶ್ವಕೋಶ – ಪ್ರಪಂಚದ ಸಮಸ್ತ ವಿಷಯಗಳನ್ನು ತಿಳಿಸುವ ದೊಡ್ಡ ಗ್ರಂಥ

## ಶ

ಶಂಕಿಸು – ಸಂದೇಹಕ್ಕೊಳಗಾಗು, ಸಂಶಯಪಡು.

ಶ್ರದ್ಧಾಳು – ನಂಬಿಕೆಯುಳ್ಳವ, ವಿಶ್ವಾಸವುಳ್ಳವ

ಶಪಿಸು – ಶಾಪಹಾಕು, ಬಯ್ಯು, ನಿಂದಿಸು

ಶ್ರಮ – ಆಯಾಸ, ಬಳಲಿಕೆ, ಕಷ್ಟ, ತೊಂದರೆ, ಸಾಧನೆ

ಶ್ರವಣ – ಕೇಳುವಿಕೆ, ಜೈನಸನ್ಯಾಸಿ, ೨೭ ನಕ್ಷತ್ರಗಳಲ್ಲಿ ಒಂದು

## ಸ

ಸಂಸ್ಕಾರ – ಸಂಸ್ಕೃತಿ, ಸಹಜ ಪ್ರವೃತ್ತಿ, ನೈರ್ಮಲ್ಯ, ಧಾರ್ಮಿಕ ವಿಧಿ, ಉತ್ತರಕ್ರಿಯೆ

ಸನ್ನಿಧಿ – ಎದುರು, ಸಾಮೀಪ್ಯ, ಸಮ್ಮುಖ

ಸವಿ – ರುಚಿ, ತಿನ್ನು

ಸಹಸ್ರ – ಸಾಸಿರ, ಸಾವಿರ

ಸಾಗರ – ಸಮುದ್ರ, ಕಡಲು, ವಾರಿಧಿ

ಸಾಮರ್ಥ್ಯ – ಕೆಚ್ಚು, ಬಲ, ಶಕ್ತಿ, ಅರ್ಹತೆ, ಯೋಗ್ಯತೆ

ಸ್ವಾರ್ಥ – ಸ್ವ ಹಿತ, ಸ್ವಪ್ರಯೋಜನ

ಸುರೆ – ಮದ್ಯ, ಕಳ್ಳು

ಸುಲಿ – ಸಿಪ್ಪೆ, ತೊಗಟೆ ಚರ್ಮ ಮುಂತಾದವುಗಳ ಎಡೆ ಕಳಚು, ದೋಚು, ಲೂಟಿ ಮಾಡು

## ಹ

ಹಿಂಡು – ಸಮೂಹ, ತಿರುಚು, ಕಿವಿಚು, ಹಾಲನ್ನು ಕರೆ, ಪೀಡಿಸು

ಹೊಳೆ – ಹೊಳಪು, ಬೆಳಕು, ಪ್ರಕಾಶಿಸು

# ಎರಡನೆಯ ಸೆಮಿಸ್ಟರ್

## ಪದ್ಯಪಾಠ – ೧

# ಈ ನೆಲ ಈ ಜಲ

**ಪ್ರವೇಶಕ್ಕೆ ಮುನ್ನ :** ಪರಿಸರದ ಹಾನಿಯಿಂದ ನಮ್ಮ ಬದುಕು ದುಸ್ತರವಾಗುತ್ತದೆ. ಹಾಗಾಗಿ ಪರಿಸರ ರಕ್ಷಣೆ ನಮ್ಮೆಲ್ಲರ ಹೊಣೆ. ಅದರ ರಕ್ಷಣೆಯತ್ತ ಹೇಗೆ ಎಚ್ಚರವಹಿಸಬೇಕು ಎಂಬುದನ್ನು ಇಲ್ಲಿ ತಿಳಿಯೋಣ.



ಈ ನೆಲ ಈ ಜಲ ಈ ಕಾಡು
ಗೀಜಗ ಕಟ್ಟಿದ ಈ ಗೂಡು
ಇರಲಿ ಇರಲಿ ಹೀಗೆ ಪ್ರಕೃತಿ ಕೊಟ್ಟ ಕೊಡುಗೆ

ಜುಳು ಜುಳು ಹರಿವ ಹೊಳೆಗೆ
ಕೊಳೆಯ ಬೆರೆಸೊ ಖಳರೇ
ಬಗೆ ಬಗೆ ಹೊಗೆಯನು ಉಗುಳಿ
ಮಲಿನಗೊಳಿಸದಿರಿ ಗಾಳಿ
ಸಾಕು ಇನ್ನು ಸಾಕು ಈ ತಪ್ಪ ತಿದ್ದಬೇಕು

ಮರಗಳ ಕಡಿದು ಕಡಿದು ಎಲ್ಲೆಡೆ ಭಣ ಭಣ ಬಿಸಿಲು
ಚಿಲಿಪಿಲಿ ಉಲಿವ ಹಕ್ಕಿ
ಅಳುತಿದೆ ಬಿಕ್ಕಿ ಬಿಕ್ಕಿ
ಸಾಕು ಇನ್ನು ಸಾಕು ಹಸಿರಾಗಬೇಕು ಬದುಕು

ರಕ್ಷಿಸಬೇಕು ಬಿಡದೇ
ನಮ್ಮ ನೆಲಜಲಗಳ ನಾವು
ನಾಳಿನ ಪೀಳಿಗೆಗಾಗಿ
ಉಳಿಸಿರಿ ನಾಡಿನ ಚೆಲುವು
ಸಿರಿನಾಡ ಚೆಲುವು ಈ ಕರುನಾಡ ಚೆಲುವು.

– ಹೆಚ್. ಡುಂಡಿರಾಜ್

**ಸಾಮರ್ಥ್ಯ :** ಪದ್ಯದ ವಿಷಯಗಳನ್ನು ಓದಿ ತಾರ್ಕಿಕವಾಗಿ ತೀರ್ಮಾನಿಸುವುದು.

**ಆಶಯ :** ಪರಿಸರದ ಉಳಿವೇ ನಮ್ಮ ಉಳಿವು ಎಂಬ ಜ್ಞಾನವನ್ನು ಉಂಟುಮಾಡುವುದರೊಂದಿಗೆ ಪರಿಸರ ಪ್ರೇಮಿಗಳಾಗಲು ವಿದ್ಯಾರ್ಥಿಗಳನ್ನು ಪ್ರೇರೇಪಿಸುವ ಆಶಯವನ್ನು ಈ ಕವಿತೆ ಒಳಗೊಂಡಿದೆ.

## ಕವಿ ಪರಿಚಯ



ಹೆಚ್. ಡುಂಡಿರಾಜ್‌ರವರು ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹಟ್ಟಿಕುದುರುನಲ್ಲಿ 1956ರಲ್ಲಿ ಜನಿಸಿದರು. ಎಂಎಸ್ಸಿ, (ಕೃಷಿ) ಪದವೀಧರರಾದ ಇವರು ಕಾರ್ಪೊರೇಷನ್ ಬ್ಯಾಂಕಿನಲ್ಲಿ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ನನ್ನ ಕವಿತೆ ನನ್ನ ಹಾಗೆ, ಏನಾಯಿತು, ಬನ್ನಿ ನಮ್ಮ ಹಾಡಿಗೆ ಮುಂತಾದವು ಅವರ ಕವನಸಂಕಲನಗಳು. ನವನೀತ, ಪಂಚ್-ಕ-ಜಾಯ್, ಹನಿಕೇತನ ಇತ್ಯಾದಿಗಳು ಹನಿಗವನ ಸಂಕಲನಗಳು. ಹುಡುಕಾಟ, ಅದ್ವಾನಪುರ, ಪುಕ್ಕಟ್ಟೆ ಸಲಹೆ ಮುಂತಾದ ನಾಟಕಗಳನ್ನು ಬರೆದಿದ್ದಾರೆ. ಅಲ್ಲದೆ ಮಕ್ಕಳ ನಾಟಕ, ಲಲಿತ ಪ್ರಬಂಧಗಳನ್ನು ಬರೆದಿದ್ದಾರೆ. ಇವರಿಗೆ ಮುದ್ದಣ ಕಾವ್ಯ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿಯ ಗೌರವ ಪ್ರಶಸ್ತಿ, ಕಡೆಂಗೋಡ್ಲು ಕಾವ್ಯ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ಬಿಂದುಶ್ರೀ ಪ್ರಶಸ್ತಿಗಳು ಲಭಿಸಿವೆ. ಪ್ರಸ್ತುತ ಈ ನೆಲ ಈ ಜಲ ಕವನವನ್ನು ಅವರ "ಬನ್ನಿ ನಮ್ಮ ಹಾಡಿಗೆ" ಎಂಬ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ. ಉತ್ತಮ ಅಭಿರುಚಿ ಹಾಸ್ಯ ಸಾಹಿತ್ಯ ಇವರಿಂದ ರಚಿತವಾಗಿದೆ.



## ಓದಿ ತಿಳಿಯಿರಿ

ಕಾಡು-ಅರಣ್ಯ, ಕಟ್ಟಿದ-ನಿರ್ಮಿಸಿದ, ಪ್ರಕೃತಿ-ನಿಸರ್ಗ, ಕೊಡುಗೆ-ಉಡುಗೊರೆ, ಕೊಳೆ-ಕಸ, ಬೆರೆಸು-ಸೇರಿಸು, ಖಳ-ದುಷ್ಟ, ತಿದ್ದು-ಸರಿಪಡಿಸು, ಉಲಿ-ಧ್ವನಿ, ಹಕ್ಕಿ-ಪಕ್ಷಿ, ಬದುಕು-ಜೀವನ, ರಕ್ಷಿಸು-ಕಾಪಾಡು, ಪೀಳಿಗೆ-ವಂಶ, ಚೆಲುವು-ಸೊಗಸು, ಸಿರಿ-ಸಂಪತ್ತು.

## ಗಮನಿಸಿ ತಿಳಿಯಿರಿ

ಬದುಕು ಹಸುರಾಗಬೇಕು - ಜೀವನ ಸುಂದರವಾಗಬೇಕು

ನಾಳಿನ ಪೀಳಿಗೆ - ನಮ್ಮ ನಂತರದ ವಂಶಕ್ಕೆ ಸೇರಿದವರು

## ಪದ್ಯ ಆಧಾರಿತ ಅಭ್ಯಾಸ

**ಅ) ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ಪ್ರಕೃತಿ ಕೊಟ್ಟ ಕೊಡುಗೆಗಳು ಯಾವುವು?

೨. ಹೊಳೆಗೆ ಕೊಳೆ ಬೆರೆಸುತ್ತಿರುವವರು ಯಾರು?

೩. ಗಾಳಿಯನ್ನು ಹೇಗೆ ಮಲಿನಗೊಳಿಸುತ್ತಿದ್ದಾರೆ?

೪. ಮರ ಕಡಿಯುವುದರಿಂದ ಆಗುವ ಹಾನಿ ಏನು?

೫. ನಾವು ಯಾರಿಗಾಗಿ ನೆಲ ಜಲಗಳನ್ನು ರಕ್ಷಿಸಬೇಕು?

**ಆ) ಎರಡು ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಗಾಳಿ, ನೀರು ಮಲಿನವಾಗದಿರಲು ಏನು ಮಾಡಬೇಕು?

೨. ಚಿಲಿಪಿಲಿ ಉಲಿವ ಹಕ್ಕಿಗಳು ಏಕೆ ಬಿಕ್ಕಿ ಬಿಕ್ಕಿ ಅಳುತ್ತಿವೆ?

೩. ಕರುನಾಡ ಚೆಲುವನ್ನು ಹೇಗೆ ರಕ್ಷಿಸಬೇಕಾಗಿದೆ?

ಇ) ಕ್ರಮವಾಗಿ ಹೊಂದಿಸಿ ಬರೆಯಿರಿ.

| ಅ | ಆ | | |
|---|---|---|---|
| ಇರಲಿ ಹೀಗೆ | ಚೆಲುವು | : | ______ |
| ಈ ತಪ್ಪ | ಮರಗಳ | : | ______ |
| ಹಸಿರಾಗಬೇಕು | ತಿದ್ದಬೇಕು | : | ______ |
| ಉಳಿಸಿರಿ | ಬದುಕು | : | ______ |
| ಕರುನಾಡ | ನಾಡಿನ ಚೆಲುವು | : | ______ |
| | ಪ್ರಕೃತಿ ಕೊಟ್ಟ ಕೊಡುಗೆ | : | ______ |

## ಸಾಮರ್ಥ್ಯ ಆಧಾರಿತ ಅಭ್ಯಾಸ

ಅ) ಈ ಕೆಳಗಿನ ಸಂದರ್ಭಗಳಲ್ಲಿ ನೀವು ತೆಗೆದುಕೊಳ್ಳುವ ತೀರ್ಮಾನಗಳನ್ನು ಒಂದೆರಡು ವಾಕ್ಯಗಳಲ್ಲಿ ಬರೆಯಿರಿ.

೧. ಅನಧಿಕೃತವಾಗಿ ರಸ್ತೆಯ ಅಂಚಿನ ಸಾಲುಮರಗಳನ್ನು ಕಡಿಯುತ್ತಿದ್ದಾರೆ.

______

______

೨. ಗೆಳೆಯನೊಬ್ಬನು ಅಲಂಕಾರಕ್ಕಾಗಿ ಹಕ್ಕಿಗೂಡುಗಳನ್ನು ಸಂಗ್ರಹಿಸುತ್ತಿದ್ದಾನೆ.

______

______



ಆ) ಈ ವಿಷಯಗಳನ್ನು ಕುರಿತು ಚರ್ಚಿಸಿ ಕೈಗೊಂಡ ತೀರ್ಮಾನವನ್ನು ಮೂರು ನಾಲ್ಕು ವಾಕ್ಯಗಳಲ್ಲಿ ಬರೆಯಿರಿ.

೧. ಶಾಲೆ ಪಕ್ಕದಲ್ಲಿ ಚಿತ್ರಮಂದಿರದ ನಿರ್ಮಾಣಕ್ಕೆ ತಯಾರಿ ನಡೆದಿದೆ.

______

______

______

೨. ನಿಮ್ಮ ಊರಿನ ಕುಡಿಯುವ ನೀರಿನ ಕೆರೆಯಲ್ಲಿ ದನಕರುಗಳನ್ನು ತೊಳೆಯುತ್ತಿದ್ದಾರೆ.

______

______

______

## ಭಾಷಾ ಚಟುವಟಿಕೆ

**ಅ) ಈ ಕೆಳಗಿನ ಶಬ್ದಗಳನ್ನು ಮಾದರಿಯಂತೆ ಸರಿಪಡಿಸಿ ಬರೆಯಿರಿ.**

**ಮಾದರಿ : ಅಸಿರಾಗು–ಹಸಿರಾಗು**

ಆರಾಡು – ____________________ ಣಮಗೆ – ____________________

ಸಾರದಾ ಪೂಜೆ – ______________ ಶಣ್ಮುಖ – ____________________

## ಪೂರಕ ಓದು

### "ಆನೆ ಹೀಗಿದೆ"

"ಊರಿಗೆ ಸರ್ಕಸ್ ಕಂಪನಿ ಬಂದಿದೆಯಂತೆ. ದೊಡ್ಡ ಆನೆಗಳೂ ಬಂದಿವೆಯಂತೆ". ಊರ ಜನರ ಈ ಮಾತುಗಳು ಐದು ಜನ ಗೆಳೆಯರ ಕಿವಿಗೆ ಬಿತ್ತು. ಪಾಪ! ಈ ಐವರೂ ಕುರುಡರು. ಇವರಿಗೆ ಆನೆ ಹೇಗಿದೆ ಎಂದು ತಿಳಿಯುವ ಆಸೆಯಾಯಿತು. ಸರ್ಕಸ್ ಆವರಣಕ್ಕೆ ಹೋಗಿ ಮಾವುತನನ್ನು ಮಾತನಾಡಿಸಿದರು. ತಮ್ಮ ಆಸೆ ತಿಳಿಸಿದರು. ಮಾವುತನು ಅವರನ್ನು ಆನೆಯಿರುವಲ್ಲಿಗೆ ಕರೆದುಕೊಂಡು ಹೋದನು. "ಮುಟ್ಟಿ ನೋಡಿರಿ ಇದೇ ಆನೆ" ಎಂದನು.

ಮೊದಲನೆಯವನು ಆನೆಯ ಕಾಲು ಮುಟ್ಟಿದ. "ಕಂಬದಂತೆ ಇದೆ ಆನೆ" ಎಂದನು. ಎರಡನೆಯವನು ಬಾಲ ಮುಟ್ಟಿದ. "ಆನೆ ಪೊರಕೆಯಂತೆ ಇದೆ" ಎಂದನು. ಮೂರನೆಯವನು ಆನೆಯ ಹೊಟ್ಟೆ ತಡವಿದ. "ಆನೆ ಗುಡಾಣದಂತೆ ಇದೆ" ಎಂದನು. ನಾಲ್ಕನೆಯವನು ಕಿವಿ ಮುಟ್ಟಿದ. "ಮೊರದಂತೆ ಇದೆ ಆನೆ" ಎಂದನು. ಐದನೆಯವನು ಸೊಂಡಿಲನ್ನು ಸವರಿದ. "ಆನೆ ಹಾವಿನಂತೆ ಇದೆ" ಎಂದನು. ಐವರೂ ತಮ್ಮ–ತಮ್ಮ ಅನುಭವಗಳಂತೆ ಆನೆ ಇರುವುದಾಗಿ ವಾದಿಸತೊಡಗಿದರು. ಈ ಮಾತುಗಳನ್ನು ಆಲಿಸಿದ ಮಾವುತನು "ನೀವುಗಳು ಹೇಳುತ್ತಿರುವ ಎಲ್ಲಾ ಅಂಶಗಳೂ ಆನೆಯಲ್ಲಿವೆ. ಆದರೆ ನಿಮ್ಮ ವಾದ ಕಂಬ, ಪೊರಕೆ, ಗುಡಾಣ, ಮೊರ ಹಾಗೂ ಹಾವಿನಂತೆ" ಎಂಬುದು. ಇದು ಪೂರ್ಣ ಸತ್ಯವಲ್ಲ. ಅವುಗಳೆಲ್ಲಾ ಅಂಶಗಳು ಮಾತ್ರ. ನಾವು ಯಾವಾಗಲೂ ತರ್ಕಿಸದೇ ತೀರ್ಮಾನಕ್ಕೆ ಬರಬಾರದು ಎಂದನು. ಅವನ ಮಾತನ್ನು ಕೇಳಿದ ಗೆಳೆಯರು ತಮ್ಮ ತಪ್ಪಾದ ತರ್ಕವನ್ನು ತಿದ್ದಿಕೊಂಡು ಧನ್ಯವಾದ ಹೇಳಿದರು.

**ಅ) ನಿಮಗೆ ಆನೆ ಎಂದರೆ ಇಷ್ಟವೇ ? ಆನೆಯ ಬಗ್ಗೆ ನಿಮ್ಮ ಮಾತುಗಳಲ್ಲಿ ಬರೆಯಿರಿ.**

______________________________________________

______________________________________________

______________________________________________

______________________________________________

# ಗದ್ಯಪಾಠ – ೨

# ದಾನಚಿಂತಾಮಣಿ ಅತ್ತಿಮಬ್ಬೆ

**ಪ್ರವೇಶಕ್ಕೆ ಮುನ್ನ :** ದತ್ತಿದಾನ, ಧರ್ಮಗಳಿಗೆ ಹೆಸರುವಾಸಿಯಾದ ನಾಡು ನಮ್ಮದು. ದಾನವೀರತೆಗೆ ಹೆಸರಾದ ಕನ್ನಡ ನಾಡಿನ ಧೀಮಂತ ವನಿತೆಯೊಬ್ಬಳ ಬಗ್ಗೆ ತಿಳಿಯೋಣ.

ನಮ್ಮ ಕರ್ನಾಟಕವು ಕವಿ–ಕಲಿಗಳ ನಾಡು. ಸಂಸ್ಕೃತಿಯ ನೆಲೆವೀಡು. ವೀರ ಪುರುಷರ, ವೀರ ರಮಣಿಯರ ನಾಡು. ಇಲ್ಲಿ ಯುದ್ಧ ವೀರರಷ್ಟೇ ಅಲ್ಲದೆ ದಾನ ವೀರರೂ ಇದ್ದಾರೆ. ದಾನ ವೀರತೆಗೆ ಹೆಸರಾದವರಲ್ಲಿ ಅತ್ತಿಮಬ್ಬೆ ಸಹ ಒಬ್ಬಳು.

ಹತ್ತನೆಯ ಶತಮಾನದಲ್ಲಿ ಜೀವಿಸಿದ್ದ ಅತಿಮಬ್ಬೆಯ ತಂದೆ ಮಲ್ಲಪ, ತಾಯಿ ಅಬ್ಬಕಬ್ಬೆ. ಇವಳ ಹುಟ್ಟೂರು ವೆಂಗಿಮಂಡಲದ ಪುಂಗನೂರು. ತಂದೆ–ತಾಯಿ ಸುಸಂಸ್ಕೃತರು. ಮಲ್ಲಪನ ಎಂಟು ಮಕ್ಕಳಲ್ಲಿ ಅತ್ತಿಮಬ್ಬೆ ಗುಂಡುಮಬ್ಬೆಯರು ಅವಳಿ ಮಕ್ಕಳು. 'ಬೆಳೆವ ಸಿರಿ ಮೊಳಕೆಯಲ್ಲಿ' ಎಂಬಂತೆ ಅತ್ತಿಮಬ್ಬೆ ಬಾಲ್ಯದಲ್ಲಿಯೇ ಅತಿಚತುರೆ. ವಿನಯ, ವಿವೇಕ ಸಂಪನ್ನೆಯಾದ ಇವಳು ಮನೆ ಮಂದಿಯ ಮುದ್ದಿನ ಮಗಳಾಗಿ ಬೆಳೆದಳು.

'ಮಕ್ಕಳಿಗೆ ಮನೆಯೇ ಮೊದಲ ಪಾಠಶಾಲೆ'. ಎಂಬಂತೆ ಅತ್ತಿಮಬ್ಬೆಗೆ ತಂದೆ ತಾಯಿಯಿಂದ ಉತ್ತಮ ಸಂಸ್ಕಾರ ದೊರೆಯಿತು. ಮಲ್ಲಪನು ಉತ್ತಮ ಗುರುಗಳನ್ನು ನೇಮಿಸಿ ಮಕ್ಕಳಿಗೆ ಮನೆಯಲ್ಲಿಯೇ ವಿದ್ಯಾಭ್ಯಾಸ ಮಾಡಿಸಿದನು. ಅತ್ತಿಮಬ್ಬೆಯು ಜಿನಚಂದ್ರ ಎಂಬ ಗುರುಗಳಿಂದ 'ಜಿನತತ್ವಗಳನ್ನು' ತಿಳಿದಳು. ಅಣ್ಣಂದಿರೊಂದಿಗೆ ತಾನೂ ಕತ್ತಿವರಸೆ, ಕುದುರೆ ಸವಾರಿ, ಬಿಲ್ವಿದ್ಯೆಗಳನ್ನು ಕಲಿತಳು.



ಮಹಾವೀರನೆಂದು ಪ್ರಖ್ಯಾತನಾದ ನಾಗದೇವನೊಂದಿಗೆ ಅತ್ತಿಮಬ್ಬೆಯ ವಿವಾಹವಾಯಿತು. ವಿವಾಹ ಸಂದರ್ಭದಲ್ಲಿ ಪೊನ್ನ ಮಹಾಕವಿಯ 'ಶಾಂತಿ ಪುರಾಣ' ಪ್ರಕಟಗೊಂಡಿತು. ಸಾಹಿತ್ಯಾಭಿಮಾನಿಯಾದ ಮಲ್ಲಪನು ಶಾಂತಿಪುರಾಣದ ಸಾವಿರ ಹಸ್ತಪ್ರತಿಗಳನ್ನು ಮಾಡಿಸಿದನು. ಮದುವೆಗೆ ಬಂದ ಬಂಧು–ಮಿತ್ರರಿಗೆ ಬಂಗಾರದ ಜಿನಬಿಂಬ ಹಾಗೂ ಹಸ್ತಪ್ರತಿಗಳನ್ನು ಉಡುಗೊರೆಯಾಗಿ ನೀಡಿದನು.

ಅತ್ತಿಮಬ್ಬೆ ಬಾಗೇವಾಡಿಗೆ ಬಂದಳು. ಅತ್ತಿಮಬ್ಬೆಯು ಅತ್ತೆ ಮಾವನಿಗೆ ಮೆಚ್ಚಿನ ಸೊಸೆಯಾಗಿ, ಪತಿಗೆ ತಕ್ಕ ಸತಿಯಾದಳು. ತನ್ನ ಸನ್ನಡತೆಯಿಂದ ಮನೆಯಲ್ಲಿ ಎಲ್ಲರ ಪ್ರೀತಿ ಗಳಿಸಿದಳು.

ಬಿಡುವಿನ ವೇಳೆಯಲ್ಲಿ ಪಂಪ ಮಹಾಕವಿಯ 'ಆದಿಪುರಾಣ' ಹಾಗೂ ಪೊನ್ನ ಮಹಾ ಕವಿಯ 'ಶಾಂತಿ ಪುರಾಣ'ಗಳ ಹಸ್ತಪ್ರತಿಗಳನ್ನು ಮಾಡುತ್ತಿದ್ದಳು. ಆಗಾಗ ಪತಿಯೊಂದಿಗೆ ಶಸ್ತ್ರಾಗಾರಕ್ಕೆ ಹೋಗಿ ಕತ್ತಿ, ಗದೆ, ಹಿಡಿದು ತನ್ನ ಕೈಚಳಕ ತೋರಿಸುತ್ತಿದ್ದಳು.

ಬಾಲಕನೊಬ್ಬ ಕಷ್ಟದಲ್ಲಿರುವುದನ್ನು ಕಂಡ ಅತ್ತಿಮಬ್ಬೆ ಮಮ್ಮಲ ಮರುಗಿದಳು. ಈತನಿಗೆ ಉತ್ತಮ ಮಾರ್ಗದರ್ಶನ ದೊರೆತರೆ ಪ್ರತಿಭಾ ಸಂಪನ್ನನಾಗುವನು ಎಂದು ಒಳಮನಸ್ಸು ಹೇಳಿತು. ಅಂತೆಯೇ ಬಾಲಕನಿಗೆ ಆಶ್ರಯ ದೊರಕಿಸಿಕೊಟ್ಟಳು. ಮುಂದೆ ಆ ಬಾಲಕ ಹೆಸರಾಂತ ಗುರುಗಳಾದ ಅಜಿತಸೇನಾಚಾರ್ಯರ ಶಿಷ್ಯನಾಗಿ ವಿದ್ಯಾಭ್ಯಾಸ ಮಾಡಿದನು. ಅತ್ತಿಮಬ್ಬೆ ಗುರುಕುಲಕ್ಕೆ ಸಾಕಷ್ಟು ಧನಸಹಾಯ ಮಾಡಿದಳು. ವಿದ್ಯಾ, ವಿನಯಸಂಪನ್ನೆಯಾದ ಅತ್ತಿಮಬ್ಬೆಯು ವಿದ್ಯಾಪ್ರಗತಿಗೆ ನೆರವಾಗಿ ವಿದ್ಯಾಪೋಷಿತೆಯೇ ಆದಳು ಎಂದು ಗುರುವೃಂದವು ಕೊಂಡಾಡಿತು. ಅತ್ತಿಮಬ್ಬೆಯ ಆಶ್ರಯ ಪಡೆದ ಆ ಬಾಲಕನಾರು ಗೊತ್ತೇ? ಆತನೇ ಕವಿಚಕ್ರವರ್ತಿ ಬಿರುದಾಂಕಿತ ರನ್ನಮಹಾಕವಿ. ರನ್ನಮಹಾಕವಿಯು ಸಾಹಸಭೀಮವಿಜಯ, ಅಜಿತತೀರ್ಥಂಕರ ಪುರಾಣ ಮೊದಲಾದ ಕೃತಿಗಳನ್ನು ರಚಿಸಿದ್ದು, ಕನ್ನಡ ಸಾಹಿತ್ಯ ಲೋಕಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾನೆ.



ಅತ್ತಿಮಬ್ಬೆಯು ತಾಯಿಯಾಗುವ ವಿಚಾರ ತಿಳಿದು ಮನೆಯವರಿಗೆಲ್ಲ ಸಂತಸವಾಯಿತು. "ಒಂದು ಸಾವಿರ ಜಿನಾಲಯಗಳನ್ನು ಕಟ್ಟಿಸಬೇಕು. ಒಂದು ಸಾವಿರ ಬಂಗಾರದ ಜಿನಬಿಂಬಗಳನ್ನು ದಾನ ಮಾಡಬೇಕು. ಒಂದು ಸಾವಿರ ಮುನಿಗಳಿಗೆ ಆಹಾರ ನೀಡಬೇಕು" ಎಂಬುದೇ ಆಕೆಯ ಮಹಾಬಯಕೆಯಾಗಿತ್ತು. ಆ ಬಯಕೆ ಈಡೇರಿತು. ಅತ್ತಿಮಬ್ಬೆಯು ಗಂಡು ಮಗುವಿನ ತಾಯಿಯಾದಳು. ಮಗುವಿಗೆ ಅಣ್ಣಿಗದೇವ ಎಂದು ನಾಮಕರಣ ಮಾಡಿದರು.

ಅತ್ತಿಮಬ್ಬೆಯು ಕೆಲವು ವೇಳೆ ನಾಗದೇವನೊಂದಿಗೆ ತಾನೂ ಯುದ್ಧಕ್ಕೆ ಹೋಗುತ್ತಿದ್ದಳು. ಸಾರಥಿಯಾಗಿ ರಥ ನಡೆಸುತ್ತಿದ್ದಳು. ಕತ್ತಿ ಹಿಡಿದು ವೀರಾವೇಶದಿಂದ ಹೋರಾಡುತ್ತಿದ್ದಳು. ಇವಳ ಶೌರ್ಯ ಸಾಹಸಗಳನ್ನು ಕಂಡು ಈಕೆ ದಾನಶೂರೆ, ದಯಾಶೀಲೆ, ಧರ್ಮಿಷ್ಠೆ ಮಾತ್ರವಲ್ಲ ರಣಧೀರೆ ಎಂದು ಜನರು ಕೊಂಡಾಡುತ್ತಿದ್ದರು.

ನಾಗದೇವನ ಮರಣಾನಂತರ ಅತ್ತಿಮಬ್ಬೆಯು ವೈರಾಗ್ಯ ತಾಳಿದಳು. ತೈಲಪ ಚಕ್ರವರ್ತಿಯು ಅಣ್ಣಿಗದೇವನನ್ನು ಲಕ್ಕುಂಡಿ ಪ್ರಾಂತ್ಯಕ್ಕೆ ಸಾಮಂತನನ್ನಾಗಿ ನೇಮಿಸಿದನು. ಅತ್ತಿಮಬ್ಬೆ ಮಗನೊಂದಿಗೆ ಲಕ್ಕುಂಡಿಯಲ್ಲಿ ನೆಲೆಸಿದಳು. ಗದಗ ಜಿಲ್ಲೆಯ ಲಕ್ಕುಂಡಿಯಲ್ಲಿ ಜಿನದೇವಾಲಯ ಕಟ್ಟಿಸಿದಳು. ಇಲ್ಲಿ ಅವಳ ಶಾಸನವೂ ಇದೆ. ರನ್ನ ಕವಿಯಿಂದ ಅಜಿತತೀರ್ಥಂಕರ ಪುರಾಣ ಬರೆಸಿ ಅದರ ಹಸ್ತಪ್ರತಿಗಳನ್ನು ಹಂಚಿದಳು. ತಾನು ಕಟ್ಟಿಸಿದ ಜಿನಾಲಯಗಳಿಗೆ ದತ್ತಿಗಳನ್ನು ನೀಡಿದಳು. ಹೀಗೆ ಧರ್ಮಕಾರ್ಯಗಳಲ್ಲಿ ನಿರತಳಾಗಿ ತನ್ನ ಅಂತಿಮ ದಿನಗಳಲ್ಲಿ ಉಪವಾಸ ವ್ರತಗಳನ್ನು ಕೈಗೊಂಡು ಕೀರ್ತಿಶೇಷಳಾದಳು.

ರನ್ನ ಮಹಾಕವಿಯು ಇವಳನ್ನು 'ದಾನಚಿಂತಾಮಣಿ' ಎಂದು ಹಾಡಿ ಹೊಗಳಿದ್ದಾನೆ. ತನ್ನ ಮಗಳಿಗೆ ಅತ್ತಿಮಬ್ಬೆ ಎಂದು ಹೆಸರಿಟ್ಟು ಅಭಿಮಾನ ಮೆರೆದಿದ್ದಾನೆ.

ಕರ್ನಾಟಕ ಸರ್ಕಾರವು ಅತ್ತಿಮಬ್ಬೆಯ ಸ್ಮರಣಾರ್ಥ ಉತ್ತಮ ಸಾಧನೆಗೈದ ಮಹಿಳಾ ಸಾಹಿತಿಗೆ 'ಅತ್ತಿಮಬ್ಬೆ ಪ್ರಶಸ್ತಿ' ನೀಡಿ ಗೌರವಿಸುತ್ತಾ ಬಂದಿದೆ. ಈ ದಾನಶೂರೆಯ ದಿವ್ಯಾದರ್ಶ ಅನುಪಮ, ಅನನ್ಯ.



**ಸಾಮರ್ಥ್ಯ : ಸರಳ ಕ್ರಿಯಾತ್ಮಕ ನಿಯಮಗಳನ್ನು ಅರ್ಥಮಾಡಿಕೊಂಡು ವಾಕ್ಯರಚಿಸುವುದು.**

**ಆಶಯ :** ದಾನವೀರತೆಗೆ ಹೆಸರಾದ ಅತ್ತಿಮಬ್ಬೆಯ ವಿನಯ, ವಿವೇಕ, ಶೌರ್ಯ ಮೊದಲಾದ ಆದರ್ಶಗುಣ ನಡವಳಿಕೆಗಳನ್ನು ಈ ಪಾಠದಲ್ಲಿ ಪರಿಚಯಿಸಲಾಗಿದೆ. ವಿದ್ಯಾರ್ಥಿಗಳು ಇಂತಹ ಉತ್ತಮ ಆದರ್ಶ ಗುಣಗಳನ್ನು ಅಳವಡಿಸಿಕೊಳ್ಳಬೇಕು ಎಂಬುದೇ ಈ ಪಾಠದ ಆಶಯವಾಗಿದೆ.

## ಓದಿ ತಿಳಿಯಿರಿ

ಕಲಿ–ವೀರ, ಹುಟ್ಟೂರು–ಜನಿಸಿದ ಊರು, ಅವಳಿ ಮಕ್ಕಳು– ಜೊತೆಯಲ್ಲಿ ಜನಿಸಿದ ಒಂದೇ ತಾಯಿಯ ಎರಡು ಮಕ್ಕಳು, ಪ್ರಖ್ಯಾತ–ಪ್ರಸಿದ್ಧ, ಬಿಂಬ–ಪಡಿನೆರಳು, ಹಸ್ತ–ಕೈ, ಬಂಧು–ನೆಂಟ, ಮಿತ್ರ–ಗೆಳೆಯ, ಸನ್ನಡತೆ–ಉತ್ತಮವಾದ ನಡವಳಿಕೆ, ದೃಷ್ಟಿ–ನೋಟ, ಈಡೇರು–ನೆರವೇರು, ಅನುಪಮ–ಹೋಲಿಕೆ ಇಲ್ಲದ, ಅನನ್ಯ–ಬೇರೆಯಲ್ಲದ, ಉಪವಾಸ–ಆಹಾರ ಸ್ವೀಕರಿಸದಿರುವುದು. ದತ್ತಿ–ದಾನ, ಕೊಡುಗೆ, ಜಿನ–ಜೈನ ಸನ್ಯಾಸಿ, ಜಿನಬಿಂಬ–ತೀರ್ಥಂಕರರ ಪ್ರತಿಮೆ

## ಗಮನಿಸಿ ತಿಳಿಯಿರಿ

**ಹಸ್ತಪ್ರತಿ** : ಕೈ ಬರಹದ ಮೂಲಕ ಬರೆಯುತ್ತಿದ್ದ ಪ್ರತಿ.

**ವೈರಾಗ್ಯ** : ಆಸೆಗಳನ್ನು ತ್ಯಜಿಸಿದ ಭಾವ.

**ಕೀರ್ತಿಶೇಷ** : ಮರಣಾನಂತರವೂ ಕೀರ್ತಿ ಅಥವಾ ಹೆಸರು ಅಮರವಾಗಿ ಉಳಿಯುವುದು.

## ಪಠ್ಯ ಆಧಾರಿತ ಅಭ್ಯಾಸ

### ಅ) ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

೧. ಅತ್ತಿಮಬ್ಬೆಯ ತಂದೆ, ತಾಯಿಯ ಹೆಸರೇನು?

___

೨. ಅತ್ತಿಮಬ್ಬೆಯ ಹುಟ್ಟೂರು ಯಾವುದು?

___

೩. ಶಾಂತಿ ಪುರಾಣವನ್ನು ಬರೆದ ಕವಿಯ ಹೆಸರೇನು?

___

೪. ರನ್ನನಿಗೆ ಬಂದಿದ್ದ ಬಿರುದು ಯಾವುದು?

___

೫. ಅತ್ತಿಮಬ್ಬೆ ಪ್ರಶಸ್ತಿಯನ್ನು ಯಾರಿಗೆ ನೀಡಲಾಗುತ್ತಿದೆ?

___



### ಆ) ಎರಡು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೧. ಅತ್ತಿಮಬ್ಬೆಯು ತನ್ನ ಬಿಡುವಿನ ವೇಳೆಯನ್ನು ಹೇಗೆ ಕಳೆಯುತ್ತಿದ್ದಳು?

___

___

೨. ಅತ್ತಿಮಬ್ಬೆಯ ಮಹಾಬಯಕೆ ಯಾವುದಾಗಿತ್ತು?

___

___

೪. ರಣರಂಗದಲ್ಲಿ ಅತ್ತಿಮಬ್ಬೆ ಹೇಗೆ ಹೋರಾಟ ಮಾಡುತ್ತಿದ್ದಳು?

_______________

_______________

೫. ಅತ್ತಿಮಬ್ಬೆಯ ದಾನ ಧರ್ಮಗಳನ್ನು ಬಿಂಬಿಸುವ ಕಾರ್ಯಗಳು ಯಾವುವು?

_______________

_______________

**ಇ) 'ಅ' ಪಟ್ಟಿಯ ಅಂಶಗಳನ್ನು 'ಆ' ಪಟ್ಟಿಯ ಸೂಕ್ತ ಅಂಶಗಳೊಂದಿಗೆ ಹೊಂದಿಸಿ ಬರೆಯಿರಿ.**

| 'ಅ' | 'ಆ' | |
|---|---|---|
| ೧. ಆದಿಪುರಾಣವು | ಧಾರವಾಡದಲ್ಲಿದೆ | _______ |
| ೨. ಶಾಂತಿಪುರಾಣವು | ಲಕ್ಕುಂಡಿಯಲ್ಲಿದೆ | _______ |
| ೩. ಸಾಹಸಭೀಮ ವಿಜಯವು | ಪೊನ್ನಕವಿಯ ಕೃತಿ | _______ |
| ೪. ಅತ್ತಿಮಬ್ಬೆ ಕಟ್ಟಿಸಿದ ಜಿನಾಲಯವು | ಪಂಪಕವಿಯ ಕೃತಿ | _______ |
| | ರನ್ನಕವಿಯ ಕೃತಿ | _______ |



**ಈ) ಬಿಟ್ಟಿರುವ ಸ್ಥಳದಲ್ಲಿ ಸರಿಯಾದ ಪದವನ್ನು ಬರೆದು, ವಾಕ್ಯವನ್ನು ಪೂರ್ಣಗೊಳಿಸಿ.**

೧. ಮಕ್ಕಳಿಗೆ ಮನೆಯೇ _______________ ಪಾಠಶಾಲೆ.

೨. ಬೆಳೆವ ಸಿರಿ _______________ ಎಂಬಂತೆ.

೩. ಮಲ್ಲಪನು ಅತ್ತಿಮಬ್ಬೆಯ ವಿವಾಹ ಸಂದರ್ಭದಲ್ಲಿ _______________ ಕೃತಿಯ ಪ್ರತಿಗಳನ್ನು ಉಡುಗೊರೆಯಾಗಿ ನೀಡಿದನು.

೪. ರನ್ನನು ತನ್ನ ಮಗಳಿಗೆ _______________ ಎಂದು ನಾಮಕರಣ ಮಾಡಿದನು.

**ಉ) ಈ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ.**

ಚತುರೆ : _______________

ಸಂಸ್ಕಾರ : _______________

ಕೈಚಳಕ : ____________________

ಮಹಾಬಯಕೆ: ____________________

## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ) ಅರ್ಥ ವ್ಯತ್ಯಾಸ ತಿಳಿದು ಮಾದರಿಯಂತೆ ವಾಕ್ಯ ರಚಿಸಿ.**

**ಮಾದರಿ : ಸರ–ಸರಿ**

ಸರ– ಸವಿತಳ ಕೊರಳಲ್ಲಿ ಮುತ್ತಿನ ಸರ ಇದೆ.

ಸರಿ– ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆಯಿರಿ.

ಹರ–ಹರಿ : ____________________

____________________

ಮರ–ಮರಿ : ____________________

____________________

ಕರ–ಕರಿ : ____________________

____________________



**ಆ) ಹಿಂದು ಮುಂದಾದ ಪದಗಳನ್ನು ಕ್ರಮವಾಗಿ ಜೋಡಿಸಿ ಅರ್ಥಪೂರ್ಣ ವಾಕ್ಯ ಬರೆಯಿರಿ.**

೧. ಅತ್ತಿಮಬ್ಬೆ ನೆಲೆಸಿದಳು ಲಕ್ಕುಂಡಿಯಲ್ಲಿ ಮಗನೊಂದಿಗೆ.

____________________

____________________

೨. ರಥ ಸಾರಥಿಯಾಗಿ ನಡೆಸುತ್ತಿದ್ದಳು ಅತ್ತಿಮಬ್ಬೆ.

____________________

____________________

೩. ಮರಣಾನಂತರ ನಾಗದೇವನ ವೈರಾಗ್ಯ ಅತ್ತಿಮಬ್ಬೆ ತಾಳಿದಳು.

____________________

____________________

## ಭಾಷಾಭ್ಯಾಸ

**ಅ) ವಚನ ಬದಲಿಸಿ ಬರೆಯಿರಿ.**

ಹಸು__________ ಗುರು__________ ಮಾವಿನ ಹಣ್ಣು __________

ಶಾಲೆ__________ ಮಗು__________ ತಾಯಿ __________

**ಗಮನಕ್ಕೆ :**

* ಒಂದು ಎಂಬ ಅರ್ಥಕೊಡುವ ಪದಗಳು ಏಕವಚನ.
* ಎರಡು ಮತ್ತು ಅದಕ್ಕಿಂತ ಹೆಚ್ಚು ಎಂಬ ಅರ್ಥಕೊಡುವ ಪದಗಳು ಹಾಗೂ ಗೌರವ ಸೂಚಕ ಪದಗಳು ಬಹುವಚನ.

## ಭಾಷಾ ಚಟುವಟಿಕೆ

**ಅ) ಕೆಳಗಿನ ವಿಷಯಗಳನ್ನು ಕುರಿತು ಮಾದರಿಯಂತೆ ಐದು ವಾಕ್ಯಗಳನ್ನು ಬರೆಯಿರಿ.**

**ಮಾದರಿ : ಕರ್ನಾಟಕ**

ನಮ್ಮ ರಾಜ್ಯ ಕರ್ನಾಟಕ

ಕರ್ನಾಟಕದ ರಾಜಧಾನಿ ಬೆಂಗಳೂರು

ಕರ್ನಾಟಕದ ಪ್ರಾದೇಶಿಕ ಭಾಷೆ ಕನ್ನಡ

ಕಲೆಯಬೀಡು ಕರ್ನಾಟಕ.

ಕರ್ನಾಟಕದ ಜೀವನದಿ ಕಾವೇರಿ.

**(ಅ) ನಮ್ಮ ದೇಶ**

__________

__________

__________

__________

__________

**(ಆ) ನಮ್ಮ ಊರು**

__________

__________

__________

__________

__________

**(ಇ) ನಮ್ಮ ಶಾಲೆ**

__________

__________

__________

__________

__________

ಆ) ಟಿ. ಸುನಂದಮ್ಮ, ಶಾಂತಾದೇವಿ ಮಾಳವಾಡ, ಕಮಲಾ ಹಂಪನಾ, ಸಾರಾ ಅಬೂಬ್ಬಕರ್, ಗೀತಾ ನಾಗಭೂಷಣ, ಬಿ.ಟಿ. ಲಲಿತಾನಾಯಕ್, ಶಶಿಕಲಾ ವೀರಯ್ಯಸ್ವಾಮಿ ಮೊದಲಾದ ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ ಪುರಸ್ಕೃತರ ಭಾವ ಚಿತ್ರಗಳನ್ನು ಸಂಗ್ರಹಿಸಿ. ಇವರ ಸಾಹಿತ್ಯ ಕೃತಿಗಳನ್ನು ಪರಿಚಯಮಾಡಿಕೊಳ್ಳಿ.

## ಪೂರಕ ಓದು

### ಒಳಿತು

ಒಳಿತನ್ನು ಮಾಡಿದವರಿಗೆ ಒಳಿತನ್ನು ಮಾಡುವವ ಮಾನವ.
ಒಳಿತನ್ನೇ ಮಾಡದವರಿಗೆ ಒಳಿತನ್ನು ಮಾಡುವವ ಮಹಾ ಮಾನವ.
ಕೆಡುಕನ್ನು ಮಾಡಿದವರಿಗೂ ಒಳಿತನ್ನು ಮಾಡುವವ
ದೇವ ಮಾನವನವ ನೋಡಯ್ಯ.

ಡಾ॥ ಸಿದ್ಧಯ್ಯ ಪುರಾಣಿಕ



ಅ) ಈ ಮೇಲಿನ ಪದ್ಯವನ್ನು ಓದಿರಿ. ಸಾರಾಂಶವನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.



# ಜಾತ್ರೆಯಲ್ಲಿ ಒಂದು ಸುತ್ತು

**ಪ್ರವೇಶಕ್ಕೆ ಮುನ್ನ :** ಮಕ್ಕಳೇ, ನೀವು ಯಾವುದಾದರು ಜಾತ್ರೆಯನ್ನು ನೋಡಿರುವಿರಾ? ಅಲ್ಲಿ ಕಂಡ ದೃಶ್ಯಗಳನ್ನು, ಕೊಂಡ ಆಟಿಕೆಗಳನ್ನು ನೆನಪಿಸಿಕೊಳ್ಳಿ. ಜಾತ್ರೆಯ ಸಂಭ್ರಮ, ಜನಸಾಗರ, ಅಂಗಡಿಗಳ ಸಾಲು, ನೆನಪಾಗುತ್ತದಲ್ಲವೇ? ನಿಮ್ಮಂತೆ ನಿಮ್ಮ ಗೆಳೆಯರು ಕೂಡ ಜಾತ್ರೆಗೆ ಹೋಗಿರುತ್ತಾರೆ. ಅವರ ಜಾತ್ರೆಯ ಅನುಭವವನ್ನು ತಿಳಿಯೋಣವೇ?

ಪರೀಕ್ಷೆ ಮುಗಿದು ಬೇಸಿಗೆ ರಜೆ ಪ್ರಾರಂಭವಾಯಿತು. ವೇಣು ಮತ್ತು ರಶ್ಮಿ ತಾಯಿಯೊಂದಿಗೆ ಅಜ್ಜನ ಮನೆಗೆ ಹೊರಟರು. ಮಧ್ಯಾಹ್ನದ ವೇಳೆಗಾಗಲೇ ಅಜ್ಜನಮನೆ ತಲುಪಿದರು. ಸಂಜೆ ಎಲ್ಲರೂ ಊರಿನಲ್ಲಿ ನಡೆಯುತ್ತಿದ್ದ ಜಾತ್ರೆಗೆ ಹೊರಟರು.

[ಜಾತ್ರೆ ಮೈದಾನದಲ್ಲಿ ಸಾಲುಸಾಲು ಅಂಗಡಿಗಳು. ಅಬ್ಬಾ! ಒಂದೇ... ಎರಡೇ? ಆಟಿಕೆ ಸಾಮಾನುಗಳ, ಬಲೂನುಗಳ, ಗೊಂಬೆಗಳ, ಬಳೆ ಸರಗಳ, ಬೆಂಡು ಬತ್ತಾಸು ಸಿಹಿ ತಿಂಡಿಗಳ ಅಂಗಡಿಗಳು ಒಂದೆಡೆ. ಬಟ್ಟೆ, ಪಾತ್ರೆ, ಹೂ–ಹಣ್ಣುಗಳ ಅಂಗಡಿಗಳ ಸಾಲು ಮತ್ತೊಂದು ಕಡೆ. ಮಗದೊಂದು ಕಡೆ ಹೋಟೆಲುಗಳು, ಜೋಕಾಲಿಗಳು, ತೂಗುತೊಟ್ಟಿಲುಗಳು ಇದ್ದು ಎಲ್ಲರನ್ನು ಆಕರ್ಷಿಸುತ್ತಿದ್ದವು. ಎಲ್ಲಿ ನೋಡಿದರೂ ಜನಸಾಗರ. ಮಕ್ಕಳು ಅಜ್ಜನೊಡನೆ ಜಾತ್ರೆ ಅಂಗಳವನ್ನು ಪ್ರವೇಶಿಸಿದರು....]





**ವೇಣು** : (ಆಶ್ಚರ್ಯದಿಂದ) ಅಜ್ಜಾ, ಇಲ್ಲಿ ಇಷ್ಟೊಂದು ಅಂಗಡಿಗಳಿವೆಯಲ್ಲಾ, ಪ್ರತಿದಿನವೂ ಹೀಗೆ ಇರುತ್ತವೆಯೇ?

**ಅಜ್ಜ** : ಬೇರೆ ದಿನಗಳಲ್ಲಿ ಇಷ್ಟೊಂದು ಅಂಗಡಿಗಳು! ಇಲ್ಲ ವೇಣು, ಜಾತ್ರೆಗೆಂದು ವಿಶೇಷವಾಗಿ ಹಾಕಿರುತ್ತಾರೆ.

**ರಶ್ಮಿ** : ಅಜ್ಜ, ಜಾತ್ರೆಯಲ್ಲೇಕೆ ಇಷ್ಟೊಂದು ಅಂಗಡಿಗಳು?

**ಅಜ್ಜ** : ರಶ್ಮಿ, ಜಾತ್ರೆಗೆ ಬಹಳಷ್ಟು ಜನ ಬರುತ್ತಾರೆ. ಬಂದವರು ತಮಗೆ ಬೇಕಾದುದನ್ನು ಕೊಂಡು ಕೊಳ್ಳಲು ಅನುಕೂಲವಾಗುತ್ತದೆ. ಅಲ್ಲದೆ ಮಾರಾಟಗಾರರಿಗೂ ಒಳ್ಳೆಯ ಅವಕಾಶ.

**ವೇಣು** : ಈ ಜಾತ್ರೆ ಎಷ್ಟು ದಿನ ನಡೆಯುತ್ತದೆ?

**ಅಜ್ಜ** : ರಥ ಎಳೆಯುವುದು ಕೇವಲ ಒಂದು ದಿನ ಮಾತ್ರ. ಆದರೆ ಜನರ ಓಡಾಟ ಎರಡು ಮೂರು ದಿನಗಳವರೆಗೂ ಇರುತ್ತದೆ. ಬನ್ನಿ ಅಂಗಡಿ ಬೀದಿಗಳನ್ನು ಸುತ್ತಿಬರೋಣ.

*(ಎಲ್ಲರೂ ಅಂಗಡಿ ಬೀದಿಯಲ್ಲಿ ಸುತ್ತಾಡಿ ರಥಬೀದಿಗೆ ಬಂದರು. ವೇಣುವಿನ ಗೆಳೆಯ ಇರ್ಫಾನ್ ತನ್ನ ತಂದೆ ತಾಯಿಯೊಂದಿಗೆ ಎದುರಾದನು. ವೇಣುವನ್ನು ನೋಡುತ್ತಲೇ ಇರ್ಫಾನ್ ಪ್ರೀತಿಯಿಂದ ಅಪ್ಪಿಕೊಂಡ)*

**ವೇಣು** : ಇರ್ಫಾನ್, ಹೇಗಿದ್ದೀಯಾ? ನಿಮ್ಮನ್ನು ಇಲ್ಲಿ ನೋಡಿ ತುಂಬಾ ಸಂತೋಷವಾಯ್ತು.

**ಇರ್ಫಾನ್** : ಚೆನ್ನಾಗಿದ್ದೇವೆ, ಇದು ನಮ್ಮೂರ ಜಾತ್ರೆ. ಇಲ್ಲಿಯ ರಥವನ್ನು ನಿರ್ಮಿಸಿದವರು ಯಾರು ಗೊತ್ತಾ? ನಮ್ಮ ತಂದೆ ಕಣೋ! ಜೊತೆಗೆ ಅವರ ಗೆಳೆಯರಾದ ರಮೇಶ್, ಜಾರ್ಜ್, ಮಹಮದ್, ವಿನ್ಸೆಂಟ್, ಶಂಕರಪ್ಪ ಇತರರೂ ಸೇರಿ ರಥ ನಿರ್ಮಿಸಿದ್ದಾರೆ.

**ವೇಣು** : ಹೌದಾ? ರಥದ ಜೋಡಣೆ, ಅದರ ಅಲಂಕಾರ ತುಂಬಾ ಸೊಗಸಾಗಿದೆ.

**ಇರ್ಫಾನ್** : ಹೌದು, ಇದೆಲ್ಲಾ ಒಂದು ದಿನದಲ್ಲಿ ಮಾಡಿದ್ದಲ್ಲ, ಹಲವು ದಿನಗಳಿಂದ ಎಲ್ಲರೂ ಸೇರಿ ಮಾಡಿರುವ ಸಿದ್ಧತೆ.

**ವೇಣು** : ಎಂತಹ ಕುಶಲತೆ, ತುಂಬಾ ಸೊಗಸಾಗಿದೆ.

*(ಅಷ್ಟರಲ್ಲಿ ಚರ್ಮವಾದ್ಯದ ಶಬ್ದ ಎಲ್ಲರ ಗಮನ ಸೆಳೆಯಿತು. ಮಕ್ಕಳು ಕುತೂಹಲಗೊಂಡರು)*

**ರಶ್ಮಿ** : ಅಮ್ಮಾ, ಅದೇನ್ ಶಬ್ದ?

**ಅಮ್ಮ** : ಜನರ ಗಮನ ಸೆಳೆಯಲು ದೊಂಬರಾಟದವರು ನುಡಿಸುತ್ತಿರುವ ಚರ್ಮವಾದ್ಯ.

**ರಶ್ಮಿ** : ದೊಂಬರಾಟವೇ! ಹಾಗೆಂದರೇನು? ಅದೆಂತಹ ಆಟ?

**ಅಜ್ಜ** : ಆಟದ ಬಗ್ಗೆ ತಿಳಿಬೇಕಾ? ಹಾಗಿದ್ದರೆ ಬನ್ನಿ ಅಲ್ಲಿಗೇ ಹೋಗೋಣ.

(ಎಲ್ಲರೂ ದೊಂಬರಾಟ ನೋಡಲು ಹೋದರು. ಸುತ್ತಲೂ ಜನರ ಗುಂಪು. ನಡುವೆ ತಂತಿಯ ಮೇಲೆ ಬಾಲಕಿ ನಡೆಯುತ್ತಿದ್ದಾಳೆ.)



**ವೇಣು** : ವ್ಹ ! ಇರ್ಫಾನ್ ನೋಡಲ್ಲಿ, ಆ ಹುಡುಗಿ ತಂತಿ ಮೇಲೆ ಹೇಗೆ ನಡೀತಿದ್ದಾಳೆ ?

**ಇರ್ಫಾನ್** : ಹೌದು, ಅವಳ ಧೈರ್ಯ, ಸಾಹಸವನ್ನು ಮೆಚ್ಚಲೇ ಬೇಕು.

**ರಶ್ಮಿ** : ಅವಳು, ಯಾವ ಆಧಾರವೂ ಇಲ್ಲದೆ ಹೇಗೆ ನಡೆಯುತ್ತಿದ್ದಾಳೆ ನೋಡು.

**ವೇಣು** : ಕೋಲಿನಿಂದ ದೇಹದ ಸಮತೋಲನ ಕಾಯ್ದು ಎಚ್ಚರಿಕೆಯಿಂದ ನಡೆಯುತ್ತಿದ್ದಾಳೆ. ಇದಕ್ಕೆ ಧೈರ್ಯ ಮತ್ತು ನಿರಂತರ ಅಭ್ಯಾಸ ಅಗತ್ಯ ಅಲ್ಲವೇ ಅಜ್ಜ.

**ಅಜ್ಜ** : ಹೌದು. ನೀನು ಹೇಳಿದ್ದು ಸರಿ.

**ರಶ್ಮಿ** : ಅಜ್ಜಾ, ಈ ರೀತಿ ಚಿಕ್ಕ ಮಕ್ಕಳನ್ನು ದುಡಿಸುವುದು ತಪ್ಪಲ್ಲವೇ? ಅಲ್ದೇ ಅವಳೂ ನಮ್ಮಂತೆ ಶಾಲೆಗೆ ಹೋಗಬೇಕಲ್ಲವೇ?

**ಅಜ್ಜ** : ಹೌದು, ಅದಕ್ಕೇ ಮಕ್ಕಳ ಶಿಕ್ಷಣ ಮತ್ತು ಹಕ್ಕಿನ ಕಾಯ್ದೆ ಜಾರಿಗೆ ಬಂದಿರೋದು. ಅಷ್ಟೇ ಅಲ್ಲ ಹಿಂದೆ ಈ ಆಟಗಳಲ್ಲಿ ಪ್ರಾಣಿಗಳನ್ನೂ ಬಳಸುತ್ತಿದ್ದರು. ಈಗ ಪ್ರಾಣಿಗಳನ್ನು ಬಳಸಬಾರದೆಂಬ ಕಾನೂನು ಇದೆ.

**ರಶ್ಮಿ** : ಅಜ್ಜ, ರಥ ನೋಡಲು ಹೋಗೋಣವೇ?

**ಅಜ್ಜ** : ಹೋಗೋಣ, ಈಗ ಏನಾದ್ರೂ ತಿಂತೀರ?

**ವೇಣು** : ಬೇಡ ಅಜ್ಜಾ. ತೆರೆದಿಟ್ಟ ತಿಂಡಿಗಳನ್ನು ತಿನ್ನಬಾರದು. ಅವುಗಳ ಮೇಲೆ ಧೂಳು, ಕ್ರಿಮಿಕೀಟಗಳು ಕುಳಿತಿರುತ್ತವೆ.

ರಶ್ಮಿ : ವೇಣು ಹೇಳಿದ್ದು ಸರಿ, ಇದನ್ನ ತಿಂದ್ರೆ ವಾಂತಿ ಭೇದಿ ಬರುತ್ತಂತೆ. ಹಾಗಂತ ನಮ್ಮ ಟೀಚರ್ ಹೇಳಿದ್ರು.

ಅಜ್ಜ : ಹೌದೇ ? ಹಾಗಿದ್ರೆ ಈಗ ರಥದ ಬಳಿ ಹೋಗೋಣ್ವೇ?

(ಎಲ್ಲರೂ ರಥದ ಬಳಿಗೆ ಹೊರಟರು. ಅಲ್ಲಲ್ಲಿ ನಿರ್ಮಿಸಿದ್ದ ವೇದಿಕೆಗಳನ್ನು ಕಂಡರು)

ರಶ್ಮಿ : ಅಮ್ಮಾ ಆ ವೇದಿಕೆಗಳು ಏಕೆ?

ಅಮ್ಮ : ರಥವನ್ನು ಎಳೆದ ನಂತರ ಅಲ್ಲಿ ನಾಟಕ, ಯಕ್ಷಗಾನ, ಬಯಲಾಟ, ನೃತ್ಯ ಮುಂತಾದ ಕಾರ್ಯಕ್ರಮಗಳು ನಡೆಯುತ್ತವೆ.

ಅಜ್ಜ : ಮಕ್ಕಳೇ, ಅಲ್ಲಿ ನೋಡಿ ರಥ ಎಳೆಯುತ್ತಿದ್ದಾರೆ.

(ಎಲ್ಲರೂ ರಥದ ಸನಿಹಕ್ಕೆ ಬಂದರು. ಜನರು ಭಕ್ತಿ ಭಾವದಿಂದ ಘೋಷಣೆಗಳನ್ನು ಕೂಗುತ್ತಾ ರಥವನ್ನು ಎಳೆಯುತ್ತಿದ್ದಾರೆ. ನೆರೆದ ಸಮೂಹದ ಹರ್ಷೋದ್ಗಾರ ಮುಗಿಲು ಮುಟ್ಟಿತ್ತು. ಎತ್ತ ನೋಡಿದರೂ ಜನವೋಜನ. ರಥದ ಮುಂದೆ ಕಲಾ ತಂಡಗಳ ಮೆರವಣಿಗೆ)

ವೇಣು : ರಥದ ಮುಂದೆ ಸಾಗುತ್ತಿರುವ ವಿವಿಧ ವೇಷಧಾರಿಗಳು ಯಾರು?

ಅಜ್ಜ : ನೋಡಿ ಅಲ್ಲಿ ರಥದ ಮುಂದೆ ನಂದಿಧ್ವಜ, ಕಂಸಾಳೆ, ವೀರಗಾಸೆ, ಡೊಳ್ಳುಕುಣಿತ, ಕೋಲಾಟ, ಹಾಲಕ್ಕಿ ಕುಣಿತ, ಮೊದಲಾದ ಜಾನಪದ ಕಲಾವಿದರು ನರ್ತಿಸುತ್ತಾ ಸಾಗುತ್ತಿದ್ದಾರೆ. ಜೊತೆಗೆ ಬ್ಯಾಂಡ್, ಓಲಗ, ತಮಟೆ, ಕಹಳೆ ವಾದಕರು ಸಾಗುತ್ತಿದ್ದಾರೆ. ಚೆಂಡೆಧ್ವನಿಗೆ ಯಕ್ಷಗಾನ ವೇಷಧಾರಿಗಳು ಕುಣಿಯುತ್ತಾ ಸಾಗುತ್ತಿದ್ದಾರೆ.

(ಎಂದು ಅಜ್ಜ ಪರಿಚಯಿಸಿದರು. ಮಕ್ಕಳು ಎಲ್ಲವನ್ನು ಸಂತಸದಿಂದ ವೀಕ್ಷಿಸಿದರು)



**ಸಾಮರ್ಥ್ಯ : ಅಪರಿಚಿತ ಸನ್ನಿವೇಶಗಳಲ್ಲಿ ನಡೆಯುವ ಸಂಭಾಷಣೆ ಮತ್ತು ಸಂವಾದಗಳನ್ನು ಅರ್ಥ ಮಾಡಿಕೊಳ್ಳುವುದು.**

**ಆಶಯ :** ಸ್ಥಳೀಯರು ಹಾಗೂ ಪರಸ್ಥಳದವರು ದೊಡ್ಡ ಸಂಖ್ಯೆಯಲ್ಲಿ ನೆರೆಯುವುದು. ವಿವಿಧ ಆಚರಣೆ ಮತ್ತು ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು, ವಿವಿಧ ಮನರಂಜನೆಗಳನ್ನು ಏರ್ಪಡಿಸಿ ಸಂತೋಷಪಡುವುದು ಮತ್ತು ತಮಗೆ ಬೇಕಾದ ವಸ್ತುಗಳನ್ನು ಕೊಳ್ಳುವುದು ಇವೆಲ್ಲಾ ಜಾತ್ರೆಯ ಲಕ್ಷಣಗಳು. ಇವುಗಳನ್ನು ಪರಿಚಯಿಸುವುದೇ ಈ ಪಾಠದ ಆಶಯ.

## ಓದಿ ತಿಳಿಯಿರಿ

ಕುಶಲತೆ–ನಿಪುಣತೆ, ಸೊಗಸು–ಚೆಲುವು, ನಿರ್ಮಿಸು–ತಯಾರಿಸು, ಸನಿಹ–ಹತ್ತಿರ, ಆಕರ್ಷಿಸು–ಸೆಳೆ, ನಿರಂತರ– ಸದಾ, ಯಾವಾಗಲೂ, ಸಮೂಹ–ಗುಂಪು,

## ಗಮನಿಸಿ ತಿಳಿಯಿರಿ

ಬೆಂಡು ಬತ್ತಾಸು – ಒಂದು ಬಗೆಯ ಸಿಹಿ ತಿಂಡಿ

ಜಾತ್ರೆ – ಹಬ್ಬ, ಉತ್ಸವ, ದೇವರ ರಥೋತ್ಸವ.

ಚರ್ಮವಾದ್ಯ – ಪ್ರಾಣಿಗಳ ಚರ್ಮದಿಂದ ಮಾಡಿದ ವಾದ್ಯ.

ಹರ್ಷೋದ್ಗಾರ – ಸಂತೋಷ ಉಂಟಾದಾಗ ಹೊರ ಹೊಮ್ಮುವ ಧ್ವನಿ.

ನಂದಿಧ್ವಜ – ಹದಿನಾರರಿಂದ ಹದಿನೆಂಟು ಮೊಳ ಎತ್ತರವಿರುವ ಬಿದುರಿನ ಬೊಂಬಿಗೆ ಹಿತ್ತಾಳೆ ಬಿರಡೆಗಳನ್ನು ಜೋಡಿಸಿರುತ್ತಾರೆ. ಏಳೆಂಟು ಅಡಿ ಎತ್ತರದಲ್ಲಿ ಸಣ್ಣ ಆಕೃತಿಯ ನಂದಿ ವಿಗ್ರಹವಿರುತ್ತದೆ. ಕಂಬದ ತುದಿಗೆ ರೇಶ್ಮೆ ಧ್ವಜವನ್ನು ಕಟ್ಟಿರುತ್ತಾರೆ.

ವೀರಗಾಸೆ – ಶೈವ ಸಂಪ್ರದಾಯಕ್ಕೆ ಸೇರಿದ ಒಂದು ಜಾನಪದ ಕಲೆ.

ಮುಗಿಲು ಮುಟ್ಟು – ಅತಿ ಎತ್ತರದ ಸ್ಥಳವನ್ನು ತಲುಪುವುದು

ವೇದಿಕೆ – ಕಾರ್ಯಕ್ರಮ ನಡೆಸಲು ನಿರ್ಮಿಸಿರುವ ಸ್ಥಳಾವಕಾಶ



## ಪದ್ಯ ಆಧಾರಿತ ಅಭ್ಯಾಸ

**ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಮಕ್ಕಳು ಯಾರ ಮನೆಗೆ ಹೊರಟರು?

______________________________

೨. ದೊಂಬರಾಟವೆಂದರೇನು?

______________________________

೩. ರಥದ ನಿರ್ಮಾಣದಲ್ಲಿ ಪಾಲ್ಗೊಂಡವರು ಯಾರು ಯಾರು?

______________________________

## ಆ) ಎರಡು ಮೂರು ವಾಕ್ಯದಲ್ಲಿ ಉತ್ತರಿಸಿರಿ.

೧. ರಥ ಬೀದಿಯನ್ನು ತಲುಪುತ್ತಲೇ ಮಕ್ಕಳು ಆಶ್ಚರ್ಯಗೊಳ್ಳಲು ಕಾರಣವೇನು?

________________________________________

________________________________________

೨. ಜಾತ್ರೆಯಲ್ಲಿ ಬೇರೆ ಬೇರೆ ಅಂಗಡಿಗಳಿರಲು ಕಾರಣವೇನು?

________________________________________

________________________________________

೩. ರಸ್ತೆ ಬದಿಯಲ್ಲಿ ಮಾರುವ ತಿಂಡಿ ತಿನಿಸುಗಳನ್ನು ಏಕೆ ತಿನ್ನಬಾರದು?

________________________________________

________________________________________

೪. ವೇದಿಕೆಗಳಲ್ಲಿ ನಡೆಯುವ ಕಾರ್ಯಕ್ರಮಗಳು ಯಾವುವು?

________________________________________

________________________________________

೫. ರಥದ ಮುಂದೆ ಸಾಗಿದ ಕಲಾತಂಡಗಳು ಯಾವುವು?

________________________________________

________________________________________



## ಇ) ಈ ಮಾತುಗಳನ್ನು ಯಾರು ಯಾರಿಗೆ ಹೇಳಿದರು.

೧. "ಜಾತ್ರೆಯಲ್ಲೇಕೆ ಇಷ್ಟೊಂದು ಅಂಗಡಿಗಳು"

________________________________________

________________________________________

೨. "ರಥದ ಮುಂದೆ ಸಾಗುತ್ತಿರುವ ವಿವಿಧ ವೇಷಧಾರಿಗಳು ಯಾರು"?

________________________________________

________________________________________

೩. “ಹೌದು, ಅವಳ ಧೈರ್ಯ, ಸಾಹಸವನ್ನು ಮೆಚ್ಚಲೇಬೇಕು”

______________________________________

______________________________________

## ಈ) ಕೆಳಗಿನ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿ.

೧. ಆಕರ್ಷಿಸು : ______________________

೨. ನಿರ್ಮಿಸು : ______________________

೩. ಘೋಷಣೆ ಕೂಗು : ______________________

೪. ವೀಕ್ಷಿಸು : ______________________

## ಉ) ಕ್ರಮವಾಗಿ ಹೊಂದಿಸಿ ಬರೆಯಿರಿ.

| ಅ | ಆ | |
| --- | --- | --- |
| ಅಜ್ಜಿ | ಹುಡುಗ | ______ |
| ತಾಯಿ | ಅಜ್ಜ | ______ |
| ಹುಡುಗಿ | ಬಾಲಕ | ______ |
| ಬಾಲಕಿ | ತಂದೆ | ______ |
| | ಗಂಡಸು | ______ |



## ಭಾಷಾ ಚಟುವಟಿಕೆ

## ಅ) ಕೊಟ್ಟಿರುವ ವಾಕ್ಯಗಳನ್ನು ಶೀಘ್ರಗತಿಯಲ್ಲಿ ಹೇಳಿ ಹಾಗೂ ಗೆಳೆಯರಿಂದ ಹೇಳಿಸಿರಿ.

೧. ಕಪ್ಪು ಕುಂಕುಮ ಕೆಂಪು ಕುಂಕುಮ.

೨. ಸಂಪಂಗಪ್ಪನ ಮಗ ಮರಿ ಸಂಪಂಗಪ್ಪ.

೩. ತರಿಕೆರೆ ಏರಿ ಮೇಲೆ ಮೂರು ಕರಿಕುರಿಮರಿ.

೪. ಅತಳ ವಿತಳ ಸುತಳ ಮಹಾತಳ ಪಾತಾಳ

ಆ) ಕೆಳಗಿನ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ.

೧. ಸೊಗಸು : ______________ , ______________

೨. ಆಕರ್ಷಿಸು : ______________ , ______________

೩. ನಿರಂತರ : ______________ , ______________

೪. ಸನಿಹ : ______________ , ______________

೫. ನಿರ್ಮಿಸು : ______________ , ______________

## ಚಟುವಟಿಕೆ

ಅ) ಈ ಕೆಳಗಿನ ಸನ್ನಿವೇಶಗಳನ್ನು ಗಮನಿಸಿ. ಪಾತ್ರವನ್ನು ಹಂಚಿಕೊಂಡು ಗೆಳೆಯರೊಂದಿಗೆ ಸಂಭಾಷಿಸಿರಿ.

೧. ಸಂತೆಯಲ್ಲಿ ತರಕಾರಿ ಮಾರುವ ಮತ್ತು ಕೊಳ್ಳುವವರ ನಡುವಿನ ಸಂಭಾಷಣೆ.

೨. ಆಸ್ಪತ್ರೆಯಲ್ಲಿ ವೈದ್ಯ, ನರ್ಸ್ ಮತ್ತು ರೋಗಿಯ ನಡುವಿನ ಸಂಭಾಷಣೆ.



## ಪೂರಕ ಓದು

## ನಸ್ರುದ್ದೀನ್ ಮನೆಯ ಔತಣ

ಮುಲ್ಲಾ ನಸ್ರುದ್ದೀನ್ ಚುರುಕುಬುದ್ಧಿಗೆ ಹೆಸರುವಾಸಿ. ಕೆಲವರಿಗೆ ಅವನ ಖ್ಯಾತಿಯನ್ನು ಕಂಡು ಹೊಟ್ಟೆಕಿಚ್ಚು. ಅವನಿಗಿಂತ ತಾವೇ ಬುದ್ಧಿವಂತರು ಎಂದು ತೋರಿಸಿಕೊಳ್ಳುವ ಚಪಲ. ಅವರು ಒಂದು ಉಪಾಯ ಹೂಡಿದರು, ಅವನ ಬಳಿಗೆ ಹೋಗಿ, "ನಸ್ರುದ್ದೀನ್, ಊರ ಹೊರಗಿನ ಹಿಮಬೆಟ್ಟದಲ್ಲಿ ನೀನು ಒಬ್ಬನೇ ಒಂದು ರಾತ್ರಿ ಕಳೆದು ಬಂದರೆ ಬಹುಮಾನ ಕೊಡುತ್ತೇವೆ. ಆದರೆ ಬೆಚ್ಚನೆಯ ಯಾವ ವಸ್ತುವನ್ನೂ ತೆಗೆದುಕೊಂಡು ಹೋಗಕೂಡದು. ಒಪ್ಪಿಗೆಯೇ?" ಎಂದು ಪಂಥ ಹೂಡಿದರು. ನಸ್ರುದ್ದೀನ್ ಒಪ್ಪಿಕೊಂಡ.

ಒಂದು ಮೋಂಬತ್ತಿಯನ್ನು ಹಚ್ಚಿಕೊಂಡು, ಒಂದು ಪುಸ್ತಕವನ್ನು ಹಿಡಿದುಕೊಂಡು, ರಾತ್ರಿಯನ್ನು ಕಳೆಯಲು ಹಿಮಬೆಟ್ಟಕ್ಕೆ ಹೋದ. ಕಗ್ಗತ್ತಲ ರಾತ್ರಿ ಮೈಕೊರೆಯುವ ಚಳಿ. ನಡಗುತ್ತಾ ರಾತ್ರಿಯನ್ನು ಕಳೆದ. ಬೆಳಗಾಯಿತು. ಊರಿಗೆ ಹಿಂದಿರುಗಿದ. ಬಹುಮಾನ ಕೊಡುವಂತೆ ಅವರನ್ನು ಕೇಳಿದ. "ನೀನು ರಾತ್ರಿಯನ್ನು ಹೇಗೆ ಕಳೆದೆ?" ಎಂದು ಅವರು ಪ್ರಶ್ನಿಸಿದರು. "ಮೋಂಬತ್ತಿಯ ಪುಟ್ಟ ಬೆಳಕಿನಲ್ಲಿ ಪುಸ್ತಕವನ್ನು ಓದುತ್ತಾ ಕಳೆದೆ" ಎಂದ ನಸ್ರುದ್ದೀನ್." ಮೋಂಬತ್ತಿ ಹಚ್ಚಿಕೊಂಡಿದ್ದೆಯಾ? ಹಾಗಾದರೆ ಬಹುಮಾನ ಇಲ್ಲ" ಎಂದುಬಿಟ್ಟರು. ನಸ್ರುದ್ದೀನ್ ಮಾತಾಡದೆ ಮನೆಗೆ ಹೊರಟು ಹೋದ.

ಒಂದು ದಿನ ಅವನು ಅವರನ್ನು ಭೇಟಿಯಾಗಿ, "ನಾಳೆ ನೀವೆಲ್ಲರೂ ನಮ್ಮ ಮನೆಗೆ ಊಟಕ್ಕೆ ಬರಬೇಕು" ಎಂದು ಕೇಳಿಕೊಂಡ. ಅವರು ಖುಷಿಯಿಂದ ಒಪ್ಪಿಕೊಂಡರು. ಮಾರನೆಯ ದಿನ ಎಲ್ಲರೂ ನಸ್ರುದ್ದೀನನ ಮನೆಗೆ ಹೋದರು. ನಸ್ರುದ್ದೀನ್ ಒಳಗಿರಬಹುದು. ಬಂದು ಕರೆದುಕೊಂಡು ಹೋಗಲಿ ಎಂದು ತೀರ್ಮಾನಿಸಿ ಜಗಲಿಯ ಮೇಲೆ ಕಾಯುತ್ತಾ ಕುಳಿತರು. ಎಷ್ಟು ಹೊತ್ತಾದರೂ ನಸ್ರುದ್ದೀನ್ ಹೊರಗೆ ಬರಲೇ ಇಲ್ಲ. ಒಂದು ಮೂಲೆಯಲ್ಲಿ ಒಲೆಯಿತ್ತು. ಅದರ ಮೇಲೆ ಒಂದು ದೊಡ್ಡ ಪಾತ್ರೆಯಿತ್ತು. ಕೆಳಗೆ ಒಂದು ಮೋಂಬತ್ತಿ ಉರಿಯುತ್ತಿತ್ತು.

ನಸ್ರುದ್ದೀನ್ ಪಾತ್ರೆಯ ಬಳಿ ನಿಂತಿದ್ದ. "ಇನ್ನೂ ಎಷ್ಟು ಹೊತ್ತು ಕಾಯಬೇಕು ಮುಲ್ಲಾ? ನಮಗೆ ಹಸಿವು ತಡೆಯಲಾಗುತ್ತಿಲ್ಲ. ಪ್ರಾಣ ಹೋಗುತ್ತಿದೆ" ಎಂದರು. "ಸಾರು ಮಾಡಲು ಪಾತ್ರೆಯಲ್ಲಿ ನೀರಿಟ್ಟಿದ್ದೇನೆ. ನೀರು ಕುದಿಸಲು ಒಲೆಯಲ್ಲಿ ಮೋಂಬತ್ತಿ ಹಚ್ಚಿಟ್ಟಿದ್ದೇನೆ. ಹ್ಞಾ! ಊಟ ಮಾಡದೆ ಮಾತ್ರ ಹೋಗಬೇಡಿ" ಎಂದ ನಸ್ರುದ್ದೀನ್.

**ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

೧. ನಸ್ರುದ್ದೀನ್ ಹಿಮಬೆಟ್ಟದಲ್ಲಿ ರಾತ್ರಿಯನ್ನು ಹೇಗೆ ಕಳೆದ?

೨. ನಸ್ರುದ್ದೀನ್ ಅವರನ್ನು ಊಟಕ್ಕೆ ಏಕೆ ಕರೆದ?

೩. ನಸ್ರುದ್ದೀನ್ ತನ್ನ ಜಾಣ್ಮೆಯನ್ನು ಹೇಗೆ ಮೆರೆದ?

# ಜಾಣ ಆಮೆ

**ಪ್ರವೇಶಕ್ಕೆ ಮುನ್ನ :** ಮಕ್ಕಳೇ, ನಿಮ್ಮ ಮನಸ್ಸು ಹೂವಿನಂತದ್ದು. ಆಟ, ಪಾಠ, ಕಥೆ, ಕವನ ಎಂದರೆ ಬಹಳ ಸಂತೋಷವಲ್ಲವೇ? ಅದರಲ್ಲೂ ಪ್ರಾಣಿ ಪಕ್ಷಿಗಳ ಕಥೆಗಳೆಂದರೆ ಮತ್ತೂ ಸೊಗಸು. ನಿಮ್ಮಲ್ಲಿ ಹೆಚ್ಚಿನ ಆಸಕ್ತಿ, ಕುತೂಹಲ ಮೂಡಲು ಕೆಲವು ಸನ್ನಿವೇಶಗಳು, ಸಂದರ್ಭಗಳು ಅಗತ್ಯ. ಸಮಸ್ಯೆಗಳು ಬಂದಾಗ ಅವನ್ನು ಹೇಗೆ ಸರಳವಾಗಿ ಎದುರಿಸಬಹುದು ಎಂದು ಈ ಕವನದಿಂದ ತಿಳಿಯೋಣ.





ಕೊಳದಲಿರುವ ಆಮೆಗೊಂದು ಆಸೆ ಮೂಡಿತು
ಬಳಿಯಲಿರುವ ಹಂಸಗಳಲಿ ಸಂಗ ಬೆಳೆಸಿತು
ಮನದಲಿರುವ ಬಯಕೆಯನ್ನು ಹೇಳತೊಡಗಿತು
ಹಕ್ಕಿಯಂತೆ ಬಾನಲೊಮ್ಮೆ ಹಾರಲೆಂದಿತು

ಹಂಸವೆರಡು ಆಮೆಯೊಡನೆ ದಡಕೆ ಬಂದವು
ಉದ್ದವಾದ ಕೋಲನೊಂದ ಹೆಕ್ಕಿ ತಂದವು
ಆಮೆಯನ್ನು ಕೋಲ ಮಧ್ಯೆ ಕಚ್ಚು ಎಂದವು
ಅತ್ತ ಇತ್ತ ಕೊಕ್ಕಿನಲ್ಲಿ ಎತ್ತಿಕೊಂಡವು

ಕಾಲುಕೊಟ್ಟು ರೆಕ್ಕೆಬಡಿದು ಹಾರತೊಡಗಿತು
ಬಾನಿನಲ್ಲಿ ಆಮೆಯಣ್ಣ ಸಾಗತೊಡಗಿತು
ತಂಪಗಾಳಿ ಮೋಡಕಂಡು ಹರುಷಗೊಂಡಿತು
ಸನಿಹದಿಂದ ಸೂರ್ಯನನ್ನು ಕಂಡೆನೆಂದಿತು

ಇತ್ತ ಬಯಲಿನಲ್ಲಿ ಪಡ್ಡೆ ಹುಡುಗರಿದ್ದರು
ಹಾರುತಿರುವ ಆಮೆಯನ್ನು ಅವರು ಕಂಡರು
ಬೀಳಬೇಕು ಆಮೆಯಣ್ಣ ಎಂದು ಕೊಂಡರು
ಕಲ್ಲು ಹಾರುತಿದೆ ಎಂದು ಕಿರುಚಿ ಕೊಂಡರು

ಮೇಲೆ ಬಾನಿನಲ್ಲಿ ಆಮೆ ಸಿಟ್ಟುಗೊಂಡಿತು
ಕೋಲು ಕೈಯಲಿಡಿದುಕೊಂಡು ಬೈಯತೊಡಗಿತು
ಹೊಟ್ಟೆಕಿಚ್ಚನೆಂದು ನೀವು ಬಿಟ್ಟೀರೆಂದಿತು
ಮತ್ತೆ ಕೋಲು ಬಾಯಲಿಡಿದು ಟಾಟಾ ಅಂದಿತು

ಪಡ್ಡೆ ಹುಡುಗರೆಲ್ಲ ಇಲ್ಲಿ ಬೆಪ್ಪರಾದರು
ತಪ್ಪನರಿತುಕೊಂಡು ಎಲ್ಲ ತೆಪ್ಪಗಾದರು

**–ಭಾಸ್ಕರ್ ನೆಲ್ಯಾಡಿ**



**ಸಾಮರ್ಥ್ಯ : ಪದ್ಯವನ್ನು ಓದಿದ ಬಳಿಕ ಕೇಳಿದ ಪ್ರಶ್ನೆಗಳಿಗೆ ಉತ್ತರಿಸುವರು.**

**ಆಶಯ :** ಕಥನವುಳ್ಳ ಕವನವೇ ಕಥನ ಕವನ. ಈ ಕವನಗಳಲ್ಲಿ ಕಥೆ ಮತ್ತು ಅದರ ನಿರೂಪಣಾ ತಂತ್ರ ಮುಖ್ಯವಾಗಿರುತ್ತವೆ. ಪ್ರತಿಯೊಂದು ಜೀವಿಯಲ್ಲೂ ಅಪಾಯದ ಅಳುಕು ಇರುವುದು ಸ್ವಾಭಾವಿಕ, ಜೊತೆಗೆ ಅಪಾಯದ ಅರಿವು ಜಾಗೃತಗೊಳ್ಳಲು ಸಾಂದರ್ಭಿಕ ಸನ್ನಿವೇಶಗಳು ಕಾರಣವಾಗಿರುತ್ತವೆ. ಸಮಸ್ಯೆಯನ್ನು ಎದುರಿಸುವ ಕೌಶಲ ಜಾಗೃತವಾಗಲಿ ಎಂಬುದೇ ಈ ಕವನದ ಆಶಯ.

## ಕವಿ ಕೃತಿ ಪರಿಚಯ



ಭಾಸ್ಕರ್ ನೆಲ್ಯಾಡಿ ಅವರು ೧೯೭೭ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ತಾಲ್ಲೂಕು ನೆಲ್ಯಾಡಿ ಗ್ರಾಮದಲ್ಲಿ ಜನಿಸಿದರು. ಇವರು ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದವರು. ಆಳ್ವಾಸ್ ಶಿಕ್ಷಕರ ತರಬೇತಿ ಸಂಸ್ಥೆ, ಮೂಡುಬಿದರೆ ಇಲ್ಲಿ ಚಿತ್ರಕಲಾ ಪ್ರಶಿಕ್ಷಕರಾಗಿ ಕೆಲಸಮಾಡುತ್ತಿದ್ದಾರೆ. "ಮಕ್ಕಳ

ಕ್ರಿಯಾಶೀಲ ಚಿತ್ರಕಲೆ"ಗಾಗಿ ೨೦೦೬ರಲ್ಲಿ ಪುತ್ತೂರು ತಾಲೂಕು ಮಕ್ಕಳ ಸಾಹಿತ್ಯ ಸಮ್ಮೇಳನದಲ್ಲಿ ಪ್ರಶಸ್ತಿ ದೊರಕಿದೆ. 'ಜಾಣ ಆಮೆ' ಇದು ಅವರ 'ಚಿಣ್ಣರ ಕಣ್ಣು' ಅಪ್ರಕಟಿತ ಕವನ ಸಂಗ್ರಹದಿಂದ ಆರಿಸಲಾಗಿದೆ.

## ಓದಿ ತಿಳಿಯಿರಿ

ಕೊಳ–ಸರೋವರ; ಸಂಗ–ಗೆಳೆತನ, ಸ್ನೇಹ; ಪಡ್ಡೆ–ಪ್ರಾಯಕ್ಕೆ ಬಂದ ಹುಡುಗರು, ತರುಣ; ಕಿರುಚು–ಚೀರು, ಒದರು; ಬೆಪ್ಪ–ಮೂರ್ಖ; ತೆಪ್ಪಗಾಗು–ಸುಮ್ಮನಾಗು, ಬಾಯಿಮುಚ್ಚು;

## ಪದ್ಯ ಆಧಾರಿತ ಅಭ್ಯಾಸ

### ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

೧. ಆಮೆ ಎಲ್ಲಿ ವಾಸವಾಗಿತ್ತು?

________________

೨. ಆಮೆಯ ಆಸೆ ಯಾವುದಾಗಿತ್ತು?

________________

೩. ಆಮೆ ಏನನ್ನು ಕಂಡು ಹರುಷಗೊಂಡಿತು?

________________

೪. ಪಡ್ಡೆ ಹುಡುಗರು ಏನೆಂದು ಕಿರುಚಿದರು?

________________

೫. ಆಮೆ ಕೋಲನ್ನು ಹಿಡಿದು ಏನೆಂದಿತು?

________________

### ಆ) ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ.

೧. ಹಂಸಗಳು ಆಮೆಯನ್ನು ಬಾನಲ್ಲಿ ಒಯ್ಯಲು ಮಾಡಿದ ಉಪಾಯವೇನು?

________________

________________

________________

೨. ಪಡ್ಡೆ ಹುಡುಗರೆಲ್ಲ ಏಕೆ ಬೆಪ್ಪಾದರು?

______________________________

______________________________

______________________________

**ಇ) ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿರಿ.**

೧. ಬಳಿಯಲಿರುವ ಹಂಸಗಳಲಿ __________ ಬೆಳೆಸಿತು.

೨. ಹಂಸಗಳು ಉದ್ದವಾದ __________ ಹೆಕ್ಕಿ ತಂದವು.

೩. ಇತ್ತ ಬಯಲಿನಲ್ಲಿ __________ ಹುಡುಗರಿದ್ದರು.

೪. ಪಡ್ಡೆ ಹುಡುಗರು ಬೀಳಬೇಕು __________ ಅಂದು ಕೊಂಡರು

**ಈ) ಅ, ಬ ಪಟ್ಟಿಯನ್ನು ಕ್ರಮವಾಗಿ ಹೊಂದಿಸಿ ಬರೆಯಿರಿ.**

| ಅ | ಬ | |
|---|---|---|
| ೧. ಕೊಳದಲ್ಲಿರುವ | ಕೋಲು | : __________ |
| ೨. ಉದ್ದವಾದ | ಹಾರಲೆಂದಿತು | : __________ |
| ೩. ಕಲ್ಲು | ಕಂಡೆನೆಂದಿತು | : __________ |
| ೪. ಬಾನಲೊಮ್ಮೆ | ಆಮೆ | : __________ |
| ೫. ಸನಿಹದಿಂದ ಸೂರ್ಯನನ್ನು | ಪಡ್ಡೆ ಹುಡುಗರು | : __________ |
| | ಹಾರುತಿದೆ | : __________ |



## ಭಾಷಾಭ್ಯಾಸ

**ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

ಉದಾ : ಬಾನಲೊಮ್ಮೆ = ಬಾನಲಿ + ಒಮ್ಮೆ

ಆಮೆಗೊಂದು = __________

ಬಯಕೆಯನ್ನು = __________

ಹಂಸವೆರಡು = __________

ಹುಡುಗರೆಲ್ಲ = __________

ಹಕ್ಕಿಯಂತೆ = __________

## ಭಾಷಾ ಚಟುವಟಿಕೆ

**ಅ) ಪದಗಳ ಅರ್ಥ ವ್ಯತ್ಯಾಸ ಬರೆಯಿರಿ.**

**ಉದಾಹರಣೆ:** ಧನ – ದನ

ಧನ – ಹಣ　　　ದನ – ಹಸು

ಕೊಳ – ಕೋಳ : ____________________

ಬಾನು – ಭಾನು : ____________________

ಹಾರು – ಆರು : ____________________

ಮಧ್ಯ – ಮದ್ಯ : ____________________

**ಆ) ಕೆಳಗಿನ ಶಬ್ದಗಳ ಹಿಂದೆ ಅಥವಾ ಮುಂದೆ ಒಂದು ಅಕ್ಷರ ಸೇರಿಸಿದಾಗ ಆಗುವ ಹೊಸ ಅರ್ಥವನ್ನು ಗಮನಿಸಿ.**

**ಮಾದರಿ:** ಸಂಗ, ಪ್ರಸಂಗ

೧) __ ಹಾರ　　　೨) __ ಮನ

೩) ಸಾಗ __　　　೪) ಕೊಳ __



**ಇ) ಕೆಳಗಿನವುಗಳ ಅನುಕರಣೆಯನ್ನು ಆಧರಿಸಿ ಬಿಟ್ಟ ಸ್ಥಳ ತುಂಬಿರಿ.**

೧. ಕಪ್ಪೆ ____________ ಗುಟ್ಟುತ್ತದೆ.

೨. ಗಂಟೆ ____________ ಬಾರಿಸುತ್ತದೆ.

೩. ನೀರು ____________ ಹರಿಯುತ್ತದೆ.

೪. ಬೆಂಕಿ ____________ ಉರಿಯುತ್ತದೆ.

**ಈ) ಈ ಪದ್ಯದಲ್ಲಿ ಬಂದಿರುವ ಪ್ರಾಸಪದಗಳನ್ನು ಪಟ್ಟಿ ಮಾಡಿರಿ.**

ಉದಾ : ಮೂಡಿತು–ಬೆಳೆಸಿತು ____________ ____________

____________ ____________ ____________

## ಚಟುವಟಿಕೆ

೧) ಪ್ರಾಣಿ ಪಕ್ಷಿಗಳನ್ನು ಕುರಿತಾದ ಕಥನ–ಕವನಗಳನ್ನು ಓದಿರಿ

೨) ಪ್ರಾಣಿ ಪಕ್ಷಿಗಳ ಕೂಗುಗಳಲ್ಲಿ ಅನುಕರಣ ಶಬ್ದಗಳನ್ನು ಗುರ್ತಿಸಿ ಹೇಳಿ.

# ಗದ್ಯಪಾಠ – ೫

## ಪೋಷಕರ ದಿನಾಚರಣೆ

**ಪ್ರವೇಶಕ್ಕೆ ಮುನ್ನ :** ಒಂದು ಶಾಲೆಯಲ್ಲಿ ಪೋಷಕರ ದಿನಾಚರಣೆ ಆಚರಿಸಿದ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಇದರಲ್ಲಿ ಪೂರ್ವಸಿದ್ಧತೆಗಾಗಿ ನಡೆಸಿದ ಚರ್ಚೆ, ಜವಾಬ್ದಾರಿ ಹಂಚಿಕೆ, ನೀಡಿದ ಸೂಚನೆಗಳು ಮತ್ತು ಕಾರ್ಯಕ್ರಮ ನಡೆದ ರೀತಿಯನ್ನು ಗಮನಿಸಿ.





ಬಿಡುವಿನ ಸಮಯ. ಮುಖ್ಯ ಗುರುಗಳು ಶಾಲಾ ಮಂತ್ರಿಮಂಡಲದ ಸಭೆ ಕರೆದರು. ಮಂತ್ರಿಗಳು ಸಭೆಗೆ ಬಂದರು.

**ಮುಖ್ಯ ಗುರುಗಳು** : ಮಕ್ಕಳೇ, ಈ ತಿಂಗಳು ನಮ್ಮ ಶಾಲೆಯಲ್ಲಿ ಪೋಷಕರ ದಿನಾಚರಣೆ ಆಚರಿಸೋಣ. ಅದಕ್ಕಾಗಿ ಕೆಲವು ಸಿದ್ಧತೆಗಳನ್ನು ಮಾಡಿಕೊಳ್ಳಬೇಕಿದೆ.

**ಎಲ್ಲರೂ** : ಪೋಷಕರು ಎಂದರೆ...?

**ಮುಖ್ಯ ಗುರುಗಳು** : ಎಲ್ಲರೂ ಒಟ್ಟಾಗಿ ಕೇಳಬಾರದು. ತಂದೆ, ತಾಯಿ ಹಾಗು ಕುಟುಂಬದ ಹಿರಿಯರೇ ಪೋಷಕರು. ನಿಮ್ಮ ಪೋಷಕರು ಶಾಲೆಯ ಅಭಿಮಾನಿಗಳು ಹಾಗಾಗಿ ಅವರು ನಮ್ಮ ಶಾಲೆಯ ಪೋಷಕರೂ ಹೌದು.

**ರಾಜು (ಮುಖ್ಯಮಂತ್ರಿ)** : ಅಂದರೆ ನಮ್ಮ ಮನೆಯವರು ಮಾತ್ರ ಶಾಲೆಯ ಪೋಷಕರೇ?

**ಮೇರಿ (ಆರೋಗ್ಯಮಂತ್ರಿ)** : ಹಾಗೇನಿಲ್ಲ, ಮಕ್ಕಳ ಬಗ್ಗೆ ಶಾಲೆಯ ಬಗ್ಗೆ ಅಭಿಮಾನ ಇರುವವರೂ ಪೋಷಕರೆ.

**ಷರೀಫ್ (ಉಪ ಮುಖ್ಯಮಂತ್ರಿ)** : ಮೇರಿ ಹೇಳಿದ್ದು ಸರಿ ಅನ್ಸುತ್ತೆ. ಸರ್, ಪೋಷಕರ ದಿನಾಚರಣೆಯ ವಿಶೇಷವೇನು?

**ಮುಖ್ಯ ಗುರುಗಳು** : ಶಾಲೆ, ಶಾಲೆಯ ಕಾರ್ಯಗಳು, ಮಕ್ಕಳ ಸಾಧನೆ–ಪ್ರತಿಭೆಯನ್ನು ಪೋಷಕರಿಗೆ ಪರಿಚಯಿಸುವುದು. ಸಾಧನೆಗೆ ಕಾರಣರಾದ ಎಲ್ಲರ ಸಹಕಾರವನ್ನು ಸ್ಮರಿಸಿ ಗೌರವಿಸುವುದು ಪೋಷಕರ ದಿನಾಚರಣೆಯ ವಿಶೇಷತೆ.

**ಐಶ್ವರ್ಯ (ಸಾಂಸ್ಕೃತಿಕಮಂತ್ರಿ)** : ಸರ್ ಸಂತೋಷ, ಪೋಷಕರ ದಿನಾಚರಣೆಗೆ ಏನೆಲ್ಲ ಸಿದ್ಧತೆ ಮಾಡ್ಕೋಬೇಕು? ಹೇಳಿದ್ರೆ ಮಾಡ್ತೇವೆ.

**ಮುಖ್ಯ ಗುರುಗಳು** : ನಿಮಗೆ ಈಗಾಗಲೇ ಪೋಷಕರ ದಿನಾಚರಣೆಯ ವಿಶೇಷತೆ ಬಗ್ಗೆ ಗೊತ್ತಾಗಿದೆ. ಅದಕ್ಕಾಗಿ ಏನೆಲ್ಲ ಮಾಡಬೇಕು ಎನ್ನುವ ಬಗ್ಗೆ ಪ್ರತಿಯೊಬ್ಬರೂ ಸಲಹೆ ನೀಡಿ (ಮಾಡಬೇಕಾದ ಕಾರ್ಯದ ಬಗ್ಗೆ ಪ್ರತಿಯೊಬ್ಬರೂ ಸಲಹೆ ನೀಡಿದರು) ಸರಿ, ಹಾಗಿದ್ದರೆ ಆಟೋಟ ಸ್ಪರ್ಧೆ ಏರ್ಪಡಿಸಬೇಕು. ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಡುವವರನ್ನು ಗುರ್ತಿಸಬೇಕು. ಚಿತ್ರ ಹಾಗೂ ಕಲಿಕೋಪಕರಣ ಪ್ರದರ್ಶನಕ್ಕೆ ಸಿದ್ಧತೆ ಆಗಬೇಕು. ಶಾಲಾ ಮೈದಾನವನ್ನು ಸ್ವಚ್ಛಗೊಳಿಸಬೇಕು. ತಳಿರು ತೋರಣಗಳಿಂದ ಸಿಂಗರಿಸಬೇಕು. ವೇದಿಕೆ ಕಾರ್ಯಕ್ರಮಗಳನ್ನು ನಡೆಸಿಕೊಡಬೇಕು. ಕಾರ್ಯಕ್ರಮದ ದಿನ ಪೋಷಕರಿಗೆ ಸ್ಪರ್ಧೆಗಳನ್ನು ಏರ್ಪಡಿಸಬೇಕು. ಕಾರ್ಯಕ್ರಮ ಚೆನ್ನಾಗಿ ಮೂಡಿಬರಲು ನೀವು ಕೆಲವು ಸೂಚನೆಗಳನ್ನು ಪಾಲಿಸಬೇಕು.



**ದರ್ಶನ್ (ವಾರ್ತಾಮಂತ್ರಿ)** : ಕೆಲ್ಸವೇನೋ ಸರಿ, ಸೂಚನೆ ಅಂದ್ರೆ?

**ಮುಖ್ಯ ಗುರುಗಳು** : ಜಾಣ, ಒಳ್ಳೆ ಪ್ರಶ್ನೆ. ಏನನ್ನು ಮಾಡಬೇಕು, ಏನನ್ನು ಮಾಡಬಾರದು ಎಂಬ ಹೇಳಿಕೆಗಳೆ ಸೂಚನೆಗಳು.

**ವಿವೇಕ್ (ಕ್ರೀಡಾ ಮಂತ್ರಿ)** : ರಸ್ತೆ ನಿಯಮದ ಫಲಕಗಳೂ ಸೂಚನೆಗಳು ಅಲ್ಲವೇ ಸಾರ್!(ಷರೀಫ್ ಮತ್ತು ಪಂಕಜ ಮಾತಾಡುತ್ತಿರುವರು)

**ಮುಖ್ಯ ಗುರುಗಳು** : ವಿವೇಕ್ ನೀನು ಹೇಳಿದ್ದೂ ಸರಿ. ಷರೀಫ್ ಪಂಕಜ ಇತರರು ಮಾತಾಡುವಾಗ ನಿಮ್ಮ ನಿಮ್ಮಲ್ಲಿ ಮಾತಾಡಬಾರದು. ಇತರರ ಅಭಿಪ್ರಾಯವನ್ನು ಕೇಳಬೇಕು.

ಪಂಕಜ (ವಿದ್ಯಾಮಂತ್ರಿ) : ಕ್ಷಮಿಸಿ ಸಾರ್, ಇನ್ನು ಮುಂದೆ ನಿಮ್ಮ ಸೂಚನೆಯನ್ನು ಪಾಲಿಸುತ್ತೇವೆ. ಮತ್ತೇ... ಷರೀಫ್ ಹೇಳ್ತಾನೆ ಕೈಬೀಸಿ ಕರೆಯುವುದೂ, ತಲೆ ಆಡಿಸುವುದು ಸೂಚನೆಯಂತೆ!

ಮುಖ್ಯ ಗುರುಗಳು : ಹೌದು, ಷರೀಫ್ ಹೇಳಿದ್ದು ಸರಿ. 'ಅದೇನು ನಿಮ್ಮ ಗುಸುಗುಸು'. ಈಗ ವಿಷಯಕ್ಕೆ ಬರೋಣ. ನೋಡು ಕಾರ್ತಿಕ್, ನೀವು ನಾಲ್ಕನೇ ತರಗತಿಯವರು ಶಾಲೆಯ ಮೈದಾನವನ್ನು ಸ್ವಚ್ಛಗೊಳಿಸಬೇಕು.

ಕಾರ್ತಿಕ್ (ಸ್ವಚ್ಛತಾ ಮಂತ್ರಿ) : ಸರಿ ಸರ್, ಐಶ್ವರ್ಯ ಸಾಂಸ್ಕೃತಿಕ ಕಾರ್ಯಕ್ರಮ ನೀಡುವವರ ಪಟ್ಟಿ ಸಿದ್ಧಪಡಿಸ್ತಾಳಂತೆ.

ಮುಖ್ಯ ಗುರುಗಳು : ಸರಿ ಹಾಗೆಯೇ ಆಗಲಿ. ಐಶ್ವರ್ಯ, ಸಿದ್ಧತೆ ಮಾಡಿಕೊಳ್ಳಲು ಗೆಳೆಯರಿಗೆ ತಿಳಿಸು.

ದರ್ಶನ್(ವಾರ್ತಾಮಂತ್ರಿ) : ನಾವು ಐದನೇ ತರಗತಿಯವರು ಶಾಲೆಯನ್ನು ತಳಿರು ತೋರಣಗಳಿಂದ ಸಿಂಗರಿಸುತ್ತೇವೆ.

ಮುಖ್ಯ ಗುರುಗಳು : ಒಳ್ಳೆಯದು. ವಿವೇಕ್ ನೀನು ಮಕ್ಕಳ ಆಟೋಟ ಸ್ಪರ್ಧೆ ನಡೆಸಿ ವಿಜೇತರ ಪಟ್ಟಿ ಸಿದ್ಧಪಡಿಸಬೇಕು. ಜೊತೆಗೆ ಕಾರ್ಯಕ್ರಮದ ದಿನ ಪೋಷಕರಿಗೆ ಆಟೋಟ ಸ್ಪರ್ಧೆ ನಡೆಸಿ ವಿಜೇತರ ಪಟ್ಟಿ ಸಿದ್ಧಪಡಿಸಬೇಕು.



ವಿವೇಕ್ (ಕ್ರೀಡಾಮಂತ್ರಿ) : ಸರ್, ನಾನು ಗೆಳೆಯರ ಜೊತೆ ಸೇರಿ ನಿಮ್ಮ ಸೂಚನೆಯನ್ನು ಕ್ರಮವಾಗಿ ಪಾಲಿಸುತ್ತೇನೆ.

ಮುಖ್ಯ ಗುರುಗಳು : ಯಾರಿಗೆ ಜವಾಬ್ದಾರಿ ಹಂಚಿಕೆಯಾಗಿಲ್ಲ ಅವರು ಉಳಿದ ಕಾರ್ಯ ಹಂಚಿಕೊಳ್ಳಿ.

ರಾಜು (ಮುಖ್ಯಮಂತ್ರಿ) : ನಾವು ಏಳನೇ ತರಗತಿಯವರು ಕಲಿಕಾ ಸಾಮಗ್ರಿಗಳ ಪ್ರದರ್ಶನಕ್ಕೆ ಸಿದ್ಧತೆ ಮಾಡುತ್ತೇವೆ.

ಮೇರಿ (ಆರೋಗ್ಯಮಂತ್ರಿ) : ಹಾಗಿದ್ದರೆ ನಾವು ಆರನೇ ತರಗತಿಯವರು ಚಿತ್ರಕಲಾ ಪ್ರದರ್ಶನಕ್ಕೆ ಸಿದ್ಧತೆ ಮಾಡುತ್ತೇವೆ.

ಷರೀಫ್ (ಉಪಮುಖ್ಯಮಂತ್ರಿ) : ಸರ್, ಪಂಕಜ ವೇದಿಕೆಯ ಕಾರ್ಯಕ್ರಮವನ್ನು ನಡೆಸಿಕೊಡಲಿ.

**ಮುಖ್ಯ ಗುರುಗಳು** : ಒಳ್ಳೆಯದು, ಷರೀಫ್‌ನ ಅಭಿಪ್ರಾಯ ಎಲ್ಲರಿಗೂ ಒಪ್ಪಿಗೆ ತಾನೆ?(ಎಲ್ಲರೂ ಒಪ್ಪಿಗೆ ಸೂಚಿಸುವರು) ಹಾಗಾದರೆ ನಾನು ಕಾರ್ಯಕ್ರಮಕ್ಕೆ ಬರುವಂತೆ ಅತಿಥಿಗಳನ್ನು ಆಮಂತ್ರಿಸುತ್ತೇನೆ. ನಿಮ್ಮ ಕೆಲಸಗಳಲ್ಲಿ ಶಿಕ್ಷಕರು ಮಾರ್ಗದರ್ಶನ ಮಾಡುತ್ತಾರೆ. ಮುಂದಿನ ಸಿದ್ಧತೆ ಮಾಡಿಕೊಳ್ಳಿ.

*(ಎಲ್ಲರೂ ಮುಖ್ಯ ಗುರುಗಳ ಸೂಚನೆಯಂತೆ ಶಿಕ್ಷಕರ ಮಾರ್ಗದರ್ಶನದಲ್ಲಿ ತಮ್ಮ ತಮ್ಮ ಕೆಲಸಕ್ಕೆ ಪೂರ್ವತಯಾರಿ ಮಾಡಿಕೊಂಡರು.)*

ಅಂದು ಪೋಷಕರ ದಿನಾಚರಣೆ. ಮಕ್ಕಳು ಸಮವಸ್ತ್ರ ಧರಿಸಿ ಶಾಲೆಗೆ ಬಂದರು. ಎಲ್ಲರೂ ತಾವು ವಹಿಸಿಕೊಂಡಿದ್ದ ಕೆಲಸವನ್ನು ಪೂರ್ಣಗೊಳಿಸಿದರು. ಪೋಷಕರು ಹಾಗೂ ಅತಿಥಿಗಳ ಆಗಮನವಾಯಿತು ಅತಿಥಿಗಳು ಚಿತ್ರಕಲೆ ಹಾಗೂ ಕಲಿಕಾ ಸಾಮಗ್ರಿಗಳ ಪ್ರದರ್ಶನ ಕೊಠಡಿಯನ್ನು ಉದ್ಘಾಟಿಸಿದರು. ಅತಿಥಿಗಳು ಹಾಗು ಪೋಷಕರು ಮಕ್ಕಳು ಬಿಡಿಸಿದ್ದ ಚಿತ್ರಗಳನ್ನು, ತಯಾರಿಸಿದ್ದ ಮಾದರಿಗಳನ್ನು ನೋಡಿ ಖುಷಿಪಟ್ಟರು. ಪೋಷಕರ ಆಟೋಟ ಸ್ಪರ್ಧೆ ನಡೆಯಿತು. ಮಕ್ಕಳು ಪೋಷಕರ ಉತ್ಸಾಹವನ್ನು ಕಂಡು ಕುಣಿದು ಕುಪ್ಪಳಿಸಿದರು.

ನಂತರ ನಡೆದ ಸಭಾ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳು ವಿಜೇತರಿಗೆ ಬಹುಮಾನ ವಿತರಿಸಿದರು. ಮಕ್ಕಳು ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಟ್ಟರು. ಶಾಲೆಯ ಹಳೆ ವಿದ್ಯಾರ್ಥಿಯಾದ ಸಭಾಧ್ಯಕ್ಷರು ಮಕ್ಕಳ ಪ್ರತಿಭೆ ಹಾಗೂ ಸಾಧನೆಯನ್ನು, ಶಿಕ್ಷಕರ ಪರಿಶ್ರಮವನ್ನು ಹೊಗಳಿದರು. ಮುಖ್ಯ ಗುರುಗಳು, ಮಕ್ಕಳ ಕಾರ್ಯ, ಪೋಷಕರ ಸಹಕಾರ ಮತ್ತು ಮಾರ್ಗದರ್ಶನಕ್ಕೆ ಕೃತಜ್ಞತೆ ಸಲ್ಲಿಸಿದರು. ರಾಷ್ಟ್ರಗೀತೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು. ಎಲ್ಲರೂ ಉಪಾಹಾರ ಸೇವಿಸಲು ನಡೆದರು.



**ಸಾಮರ್ಥ್ಯ : ಮೌಖಿಕ ಸೂಚನೆಗಳ ಸರಣಿಯನ್ನು ಅರ್ಥ ಮಾಡಿಕೊಂಡು ಗುಂಪು ಚಟುವಟಿಕೆಯನ್ನು ಕಾರ್ಯರೂಪಕ್ಕೆ ತರುವುದು**

**ಆಶಯ :** ಚರ್ಚೆಯಲ್ಲಿ ನಮ್ಮ ಅಭಿಪ್ರಾಯವನ್ನು ಹಂಚಿಕೊಳ್ಳುವ ಜೊತೆಗೆ ಇತರರ ಅಭಿಪ್ರಾಯಗಳನ್ನು ಆಲಿಸಿ ಗೌರವಿಸುವುದು. ಸಂದರ್ಭಕ್ಕೆ ತಕ್ಕಂತೆ ಸ್ಪಷ್ಟ ಸೂಚನೆಗಳನ್ನು ನೀಡುವ ಮತ್ತು ಪಾಲಿಸುವ ಜಾಣ್ಮೆ ಪ್ರದರ್ಶಿಸುವುದು. ವಹಿಸಿಕೊಂಡ ಜವಾಬ್ದಾರಿಯನ್ನು ಕಾಲಮಿತಿಯೊಳಗೆ ಉತ್ತಮವಾಗಿ ನಿರ್ವಹಿಸುವುದನ್ನು ರೂಢಿಸಿಕೊಳ್ಳುವುದು ಇಲ್ಲಿನ ಆಶಯವಾಗಿದೆ.

## ಓದಿ ತಿಳಿಯಿರಿ

ಅಭಿಮಾನ–ಹೆಮ್ಮೆ; ಸಾಧನೆ–ಸಿದ್ಧಿ; ಪ್ರತಿಭೆ–ಹೊಳಪು, ವಿಶೇಷ ಪ್ರಜ್ಞೆ; ಸ್ಮರಿಸು–ನೆನಪಿಸು; ಸ್ಪರ್ಧೆ–ಪೈಪೋಟಿ; ಪ್ರದರ್ಶನ–ತೋರಿಸು; ಸ್ವಚ್ಛ–ಶುದ್ಧವಾದ; ಇತರರು–ಬೇರೆಯವರು; ಅಭಿಪ್ರಾಯ–

ಆಶಯ: ವಿಜೇತರು–ಗೆದ್ದವರು: ಮಾರ್ಗದರ್ಶನ–ದಾರಿತೋರು: ಆಗಮನ–ಬರುವುದು: ಉದ್ಘಾಟನೆ–ಪ್ರಾರಂಭ: ಖುಷಿ–ಸಂತೋಷ: ಕೃತಜ್ಞತೆ–ಉಪಕಾರ ಸ್ಮರಣೆ:

## ಗಮನಿಸಿ ತಿಳಿಯಿರಿ

**ದಿನಾಚರಣೆ** : ನೆನಪಿಗಾಗಿ ಆಚರಿಸುವ ಕಾರ್ಯಕ್ರಮ ಅಥವಾ ಸಮಾರಂಭ

**ಫಲಕ** : ಎಲ್ಲರ ಗಮನಕ್ಕಾಗಿ ಬರೆದಿರುವ ಅಥವಾ ಬರೆದಿರುವುದನ್ನು ಹಾಕಲು ಇರುವ ಹಲಗೆ.

**ಸಾಂಸ್ಕೃತಿಕ ಕಾರ್ಯಕ್ರಮ** : ಹಾಡು, ನೃತ್ಯ, ನಾಟಕ ಮೊದಲಾದ ಸಂಸ್ಕೃತಿಗೆ ಸಂಬಂಧಿಸಿದ ಕಾರ್ಯಕ್ರಮ

**ಅತಿಥಿಗಳು** : ಆಮಂತ್ರಣ ಪಡೆದು ಬರುವ ಗೌರವಸ್ಥರು.

**ಚಿತ್ರಕಲಾ ಪ್ರದರ್ಶನ** : ಬಿಡಿಸಿರುವ ಚಿತ್ರಗಳನ್ನು ನೋಡಲು ಅಥವಾ ಮಾರಾಟಕ್ಕಾಗಿ ಇಟ್ಟಿರುವುದು.

## ಪಠ್ಯ ಆಧಾರಿತ ಅಭ್ಯಾಸ

### ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

೧. ಮುಖ್ಯ ಗುರುಗಳು ಏಕೆ ಸಭೆ ಕರೆದರು?

________________________________

೨. ಮಕ್ಕಳ ಪೋಷಕರೆಂದರೆ ಯಾರು?

________________________________

೩. ಮುಖ್ಯ ಗುರುಗಳು ಕಾರ್ತಿಕನಿಗೆ ನೀಡಿದ ಸೂಚನೆ ಏನು?

________________________________

೪. ಮಕ್ಕಳು ಯಾರ ಸೂಚನೆಯನ್ನು ಪಾಲಿಸಿದರು?

________________________________

೫. ಪೋಷಕರಿಗೆ ಸ್ಪರ್ಧೆ ನಡೆಸುವ ಕಾರ್ಯವನ್ನು ಯಾರು ನಿರ್ವಹಿಸಿದರು?

________________________________

### ಆ) ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ.

೧. ಸೂಚನೆ ಎಂದರೇನು?

________________________________

________________________________

೨. ಪೋಷಕರ ದಿನಾಚರಣೆಯ ವಿಶೇಷತೆ ಏನು?

______________________________

______________________________

೩. ಸೂಚನೆಗಳು ಏಕೆ ಬೇಕಿವೆ?

______________________________

______________________________

**ಇ) ಈ ಕೆಲಸಗಳನ್ನು ಮಾಡಲು ಶಿಕ್ಷಕರು ನೀಡಿರುವ ಸೂಚನೆಗಳನ್ನು ಬರೆಯಿರಿ.**

೧. ಇತರರು ಮಾತಾಡುವಾಗ ಯಾರೂ ತಮ್ಮ ತಮ್ಮಲ್ಲಿ ಮಾತಾಡಲಿಲ್ಲ.

______________________________

______________________________

______________________________

೨. ನಾವು ಏಳನೇ ತರಗತಿಯವರು ಕಲಿಕಾ ಸಾಮಗ್ರಿಗಳ ಪ್ರದರ್ಶನಕ್ಕೆ ಸಿದ್ಧತೆ ಮಾಡುತ್ತೇವೆ.

______________________________

______________________________

______________________________



**ಈ) ಈ ಮಾತುಗಳನ್ನು ಯಾರು ಯಾರಿಗೆ ಹೇಳಿದರು?**

೧. "ಈ ತಿಂಗಳು ನಮ್ಮ ಶಾಲೆಯಲ್ಲಿ ಪೋಷಕರ ದಿನಾಚರಣೆ ಆಚರಿಸೋಣ."

______________________________

______________________________

೨. "ಐಶ್ವರ್ಯ ಸಾಂಸ್ಕೃತಿಕ ಕಾರ್ಯಕ್ರಮ ನೀಡುವವರ ಪಟ್ಟಿ ಸಿದ್ಧಪಡಿಸ್ತಾಳಂತೆ"

______________________________

______________________________

೩. "ಷರೀಫ್‌ನ ಅಭಿಪ್ರಾಯ ಎಲ್ಲರಿಗೂ ಒಪ್ಪಿಗೆ ತಾನೆ?"

______________________________

______________________________

೪. "ಮಕ್ಕಳ ಬಗ್ಗೆ, ಶಾಲೆಯ ಬಗ್ಗೆ ಅಭಿಮಾನವಿರುವವರೂ ಪೋಷಕರೆ"

______________________________________________

______________________________________________

## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ. ಮನೆಯಲ್ಲಿ ನಿಮಗೆ ಮಾಡಿ ಎಂದು ಹೇಳಿರುವ ಯಾವುದಾದರು ಎರಡು ಸೂಚನೆಗಳನ್ನು ಬರೆಯಿರಿ.**

______________________________________________

______________________________________________

______________________________________________

**ಆ. ಶಾಲೆಯಲ್ಲಿ ನೀವು ಮಾಡಬೇಡಿ, ಎಂದು ಹೇಳಿರುವ ಯಾವುದಾದರು ಎರಡು ಸೂಚನೆಗಳನ್ನು ಬರೆಯಿರಿ.**



______________________________________________

______________________________________________

______________________________________________

**ಇ. ಆವರಣದಲ್ಲಿ ಕೊಟ್ಟಿರುವ ಸೂಚನೆಗಳನ್ನು ಯಾರು ಯಾವ ಸೂಚನೆಯನ್ನು ಪಾಲಿಸಿಲ್ಲ ಎಂಬುದನ್ನು ನಿಗದಿತ ಸ್ಥಳದಲ್ಲಿ 'ತಪ್ಪು' (X) ಎಂದು ಗುರುತಿಸಿ.**

(ದಿನಾಲು ಸ್ವಲ್ಪ ಸಮಯ ಆಟಆಡಿ. ಅಂದಂದಿನ ಪಾಠವನ್ನು ಅಂದಂದೇ ಓದಿ. ತಪ್ಪಿಲ್ಲದೇ ಸ್ಪಷ್ಟವಾಗಿ ಬರೆಯಿರಿ)

ರಾಜು ದಿನಾಲು ಹೆಚ್ಚು ಸಮಯ ಆಟ ಆಡುತ್ತಾನೆ. [ ]

ಪಂಕಜ ದಿನಾಲು ಸ್ವಲ್ಪ ಸಮಯ ಆಡುತ್ತಾಳೆ. [ ]

ಪಂಕಜ ಅಂದಂದಿನ ಪಾಠವನ್ನು ಅಂದಂದೇ ಓದುತ್ತಿಲ್ಲ. [ ]

ಪಂಕಜ ತಪ್ಪಿಲ್ಲದೆ ಸ್ಪಷ್ಟವಾಗಿ ಬರೆಯುತ್ತಾಳೆ. [ ]

ರಾಜು ಅಂದಂದಿನ ಪಾಠವನ್ನು ಅಂದಂದೇ ಓದುತ್ತಾನೆ. [ ]

ರಾಜು ತಪ್ಪಿಲ್ಲದೆ ಸ್ಪಷ್ಟವಾಗಿ ಬರೆಯುತ್ತಾನೆ. [ ]

### ಈ. ಇಲ್ಲಿನ ಸೂಚನೆಗಳನ್ನು ಅನುಕ್ರಮವಾಗಿ ಅನುಸರಿಸಿರಿ.

- ಖಾಲಿ ಚೌಕದ ಒಳಗೆ ಮಧ್ಯಭಾಗದಲ್ಲಿ ಉಂಗುರ ಅಳತೆಯ ಒಂದು ವೃತ್ತ ಬರೆಯಿರಿ.
- ಈ ವೃತ್ತಕ್ಕೆ ತಾಗಿದಂತೆ ಅದರ ಕೆಳಗೆ ಸ್ವಲ್ಪ ದೊಡ್ಡ ವೃತ್ತ ಬರೆಯಿರಿ. ಚಿಕ್ಕ ವೃತ್ತದ ಒಳಗಿನ ಮಧ್ಯ ಭಾಗದಲ್ಲಿ ಎರಡು ಚುಕ್ಕೆಗಳನ್ನು ಇಟ್ಟು ಎರಡು ಕಣ್ಣುಗಳನ್ನು ಬರೆಯಿರಿ
- ಎರಡು ಕಣ್ಣುಗಳ ನಡುವಿನ ಭಾಗದಿಂದ ಕೆಳಕ್ಕೆ ಒಂದು ಪುಟ್ಟ ಗೆರೆ ಎಳೆಯಿರಿ
- ಗೆರೆಯ ಎಡ ಬಲ ಭಾಗಗಳಲ್ಲಿ ಮೀಸೆಯಂತೆ ತಲಾ ಮೂರು ಗೆರೆಗಳನ್ನು ಎಳೆಯಿರಿ
- ಚಿಕ್ಕ ವೃತ್ತದ ಮೇಲೆ, ವೃತ್ತಕ್ಕೆ ತಾಗುವಂತೆ ಎಡ ಬಲಗಳಲ್ಲಿ ಕಿವಿಯಂತೆ ಕಾಣುವ ಎರಡು ಕಮಾನುಗಳನ್ನು ಬರೆಯಿರಿ
- ದೊಡ್ಡ ವೃತ್ತದ ಕೆಳ ತುದಿಗೆ ತಾಗಿದಂತೆ ಬಾಲವನ್ನು ಹೋಲುವ ಗೆರೆ ಎಳೆಯಿರಿ
- ನೀವು ಬರೆದ ಚಿತ್ರ ಯಾವುದೆಂದು ಊಹಿಸಿ.





## ಭಾಷಾಭ್ಯಾಸ

**ಅ) ಕೊಟ್ಟಿರುವ ಪದಗಳನ್ನು ಸ್ತ್ರೀಲಿಂಗ, ಪುಲ್ಲಿಂಗ ಮತ್ತು ನಪುಂಸಕ ಲಿಂಗಗಳಾಗಿ ವಿಂಗಡಿಸಿ ಬರೆಯಿರಿ.**

**(ಗೆಳೆಯ, ಸ್ನೇಹಿತೆ, ಅಣ್ಣ, ಮಗು, ತಂಗಿ ತಾತ, ಮರ, ಪುಸ್ತಕ ಲಕ್ಷ್ಮಿ)**

ಸ್ತ್ರೀಲಿಂಗ : ____________________

ಪುಲ್ಲಿಂಗ : ____________________

ನಪುಂಸಕಲಿಂಗ : ____________________

ಆ) ಚಿತ್ರ ಗಮನಿಸಿ ಅರ್ಥ ಪೂರ್ಣ ವಾಕ್ಯ ಬರೆಯಿರಿ.







______________________ ______________________ ______________________

______________________ ______________________ ______________________

ಇ) ಕೆಳಗಿನ ವಾಕ್ಯಗಳನ್ನು ಆವರಣದಲ್ಲಿ ಕೊಟ್ಟಿರುವ ಸೂಚನೆಗಳಿಗೆ ಅನುಗುಣವಾಗಿ ಬರೆಯಿರಿ.

೧) ಅವನು ಒಳ್ಳೆಯ ಈಜುಗಾರ. (ಸ್ತ್ರೀಲಿಂಗ ಎಂಬ ಅರ್ಥ ಬರುವಂತೆ ಬರೆಯಿರಿ)

______________________________________________

೨) ವಿವೇಕ ನೀರನ್ನು ಕುಡಿದನು. (ವಿವೇಕ ಎಂಬ ಪದಕ್ಕೆ ಬದಲಾಗಿ ಕುದುರೆ ಎಂಬ ಪದ ಸೇರಿಸಿ ವಾಕ್ಯ ರಚಿಸಿ)

______________________________________________

೩) ಅವಳು ವೇಗದ ಓಟಗಾರ್ತಿ. (ಪುಲ್ಲಿಂಗ ರೂಪದಲ್ಲಿ ಬರೆಯಿರಿ)

______________________________________________



**ಗಮನಕ್ಕೆ :** **ಗಂಡು** ಎಂಬ ಅರ್ಥ ಬರುವ ಪದಗಳಿಗೆ **'ಪುಲ್ಲಿಂಗ'** ಎಂದೂ **ಹೆಣ್ಣು** ಎಂಬ ಅರ್ಥ ಬರುವ ಪದಗಳಿಗೆ **'ಸ್ತ್ರೀಲಿಂಗ'** ಎಂದೂ ಹಾಗೂ **ಗಂಡು ಹೆಣ್ಣು** ಎಂಬ ಎರಡೂ ಅರ್ಥ ಬಾರದ ಪದಗಳಿಗೆ **'ನಪುಂಸಕ ಲಿಂಗ'** ಎಂದು ಕರೆಯುವರು.

## ಭಾಷಾ ಚಟುವಟಿಕೆ

ನಿಮಗೆ ಗೊತ್ತಿರುವ ಪದದ ಹಿಂದೆ ಅಥವಾ ಮುಂದೆ ಒಂದೊಂದೇ ಅಕ್ಷರ ಸೇರಿಸಿ ಹೊಸ ಪದಗಳನ್ನು ರಚಿಸಿ.

ಉದಾ : ವನ– ಕವನ – ವನಜ

# ಗದ್ಯಪಾಠ – ೬

# ವಿಶ್ವ ಆರೋಗ್ಯ ದಿನಾಚರಣೆ

**ಪ್ರವೇಶಕ್ಕೆ ಮುನ್ನ :** ನಮಗೆ ತಿಳಿದಿರುವ ವಿಷಯವನ್ನು ಇತರರಿಗೆ ಮನಮುಟ್ಟುವಂತೆ ಹೇಳುವುದೂ ಒಂದು ಕಲೆ. ಇಲ್ಲಿ ವಸ್ತುಗಳೆ ತಮ್ಮ ಬಗ್ಗೆ ಪರಿಚಯಿಸಿಕೊಳ್ಳುವ ಸಂದರ್ಭವನ್ನು ಕೊಡಲಾಗಿದೆ. ಪರಿಚಯ ಮಾಡಿಕೊಳ್ಳುವಲ್ಲಿ ವೈವಿಧ್ಯತೆಯನ್ನು ಗಮನಿಸೋಣ.

ಅಂದು ಫೆಬ್ರವರಿ ೭, ವಿಶ್ವ ಆರೋಗ್ಯ ದಿನಾಚರಣೆ. ತರಕಾರಿಗಳು ಅರಿವು ಮೂಡಿಸಲು ಏರ್ಪಡಿಸಿದ್ದ ಕಾರ್ಯಕ್ರಮ. ಇಡೀ ಆಹಾರ ಪದಾರ್ಥಗಳ ದಂಡೇ ಅಲ್ಲಿ ಸೇರಿತ್ತು. ಎಲ್ಲಿ ನೋಡಿದರೂ ದವಸ–ಧಾನ್ಯ, ಸೊಪ್ಪು–ತರಕಾರಿ, ಹಣ್ಣು–ಹಂಪಲು, ಔಷಧಿ ಸಸ್ಯಗಳು, ಸಾಂಬಾರ ಪದಾರ್ಥಗಳ ಕಲರವ.

ಪ್ರದರ್ಶನಕ್ಕೆ ಜೋಡಿಸಿದ್ದ ಔಷಧಿ ಸಸ್ಯಗಳ ಸಾಲು, ಎಲೆಗಳಿಂದ ರಚಿಸಿದ ಚಿತ್ರಗಳ ಪ್ರದರ್ಶನ. ಹಣ್ಣು ಮತ್ತು ತರಕಾರಿಗಳಿಂದ ಮಾಡಿದ ವ್ಯಕ್ತಿ, ಪ್ರಾಣಿ, ಪಕ್ಷಿಗಳ ಮಾದರಿಗಳು. ತರಕಾರಿಗಳಿಂದ ಒತ್ತುಚಿತ್ರ ಬಿಡಿಸುವ ಕಲೆಯ ಪ್ರದರ್ಶನ. ಮಣ್ಣಿನ ಕುಂಡ ಹಾಗೂ ಬೇಡವಾದ ವಸ್ತುಗಳಲ್ಲಿ ಬೆಳೆಸಿರುವ (ಹಳೆಯ ಟೈರ್, ಡಬ್ಬ ಇತ್ಯಾದಿ) ಹಣ್ಣು, ತರಕಾರಿ ಸೊಪ್ಪಿನ ಗಿಡಗಳು. ಹಬ್ಬಿರುವ ಬಳ್ಳಿಗಳಲ್ಲಿ ಜೋತು ಬಿದ್ದಿರುವ ಕಾಯಿಗಳು. ತಿಂಡಿ ತಿನಿಸುಗಳ ಅಂಗಡಿಗಳು. ಆರೋಗ್ಯದ ಬಗ್ಗೆ ಅರಿವು ಮೂಡಿಸುವ ಭಿತ್ತಿಪತ್ರಗಳು ಮತ್ತು ಕರಪತ್ರಗಳು ಎಲ್ಲರನ್ನು ಆಕರ್ಷಿಸುತ್ತಿದ್ದವು.



ಸಂಜೆಯ ಕಾರ್ಯಕ್ರಮ ಹಣ್ಣು ತರಕಾರಿಗಳಿಂದ ಅಲಂಕೃತವಾದ ವೇದಿಕೆ. ನೆರೆದ ಆಹಾರ ಪದಾರ್ಥಗಳ ಸಮೂಹ. ಸೊಪ್ಪು ತರಕಾರಿಗಳಿಂದ ತಮ್ಮ ಬಗ್ಗೆ ನಿರರ್ಗಳವಾಗಿ ಮಾತನಾಡುವ ಸ್ಪರ್ಧೆ. ನಿರೂಪಕರ ಸೂಚನೆಯಂತೆ ಪ್ರತಿಯೊಬ್ಬರಿಗೂ ನೀಡಿದ್ದ ಕಾಲಾವಕಾಶ ಎರಡು ನಿಮಿಷ.

***ಮೊದಲಿಗೆ ವೇದಿಕೆಗೆ ಬಂದ ಅತಿಥಿ;***

ನಾನು ಹಸಿರು ಬಣ್ಣದ ತರಕಾರಿ. ಮೈಮೇಲೆ ತ್ರಿಕೋನಾಕೃತಿಯ ಉಬ್ಬಿರುವ ಪಟ್ಟೆ ಇದೆ. ನಾನು ಭಾರತೀಯ. ಯಾರೆಂದು ತಿಳಿಯಿತೇ? ಹೌದು! ನಾನೇ ಹೀರೇಕಾಯಿ. ನನ್ನಲ್ಲಿ 'ಎ' ಮತ್ತು 'ಸಿ' ಅನ್ನಾಂಗದ ಜೊತೆಗೆ ಖನಿಜಾಂಶವಿದೆ. ಪಲ್ಯ, ಸಾಂಬಾರು, ಬಜ್ಜಿ, ಗೊಜ್ಜುಗಳಲ್ಲಿ ಬಳಸುತ್ತಾರೆ.




*ಸಭಿಕರಿಂದ ಚಪ್ಪಾಳೆ. ನಂತರ ವೇದಿಕೆ ಏರಿದ್ದು ಹೂಕೋಸು*

ಇಲ್ಲಿ ಸೇರಿರುವ ಬಂಧುಗಳೇ, ಒಂದೇ ಕುಟುಂಬಕ್ಕೆ ಸೇರಿದ ನನ್ನನ್ನು ಲಕ್ಷಣಕ್ಕೆ ಅನುಗುಣವಾಗಿ ಗೆಡ್ಡೆಕೋಸು, ಎಲೆ ಕೋಸು ಮತ್ತು ಹೂ ಕೋಸು ಎಂದು ನಾಮಕರಣ ಮಾಡಿದ್ದಾರೆ. ಸತ್ವಯುತ ಆಹಾರ ಎಂದು ಗುರ್ತಿಸಿದ್ದು ಸೂಪ್, ಹುಳಿ ಪಲ್ಯ, ಪರೋಟ, ಗೋಬಿಮಂಚೂರಿ, ಪಕೋಡ ಮುಂತಾದ ಅಡುಗೆಗಳಲ್ಲಿ ಬಳಸುತ್ತಾರೆ. ತಿಂದಿದ್ದು ನೆನಪಿಗೆ ಬಂದಿರಬಹುದು. ಬಾಯಲ್ಲಿ ನೀರೂ ಬಂದಿರಬಹುದಲ್ಲವೇ? ಇರಲಿ ವಿಷಯಕ್ಕೆ ಬರೋಣ. ನನ್ನ ಸೇವನೆಯಿಂದ ರಕ್ತ ಶುದ್ಧಿ ಹಾಗು ಚರ್ಮ ರೋಗಗಳು ದೂರವಾಗುತ್ತದಂತೆ. ಇದನ್ನೆಲ್ಲ ಗುರ್ತಿಸಿರುವ ಮಾನವ ನಿನಗೆ ನಾನು ಕೃತಜ್ಞ, ನಿಮ್ಮ ಸೇವೆಗೆ ನಾನು ಸದಾ ಸಿದ್ಧ. ನನ್ನನ್ನು ಸೇವಿಸಿ ಆರೋಗ್ಯದಿಂದಿರಿ' ಎಂದು ಹೇಳಿ ತನ್ನ ಮಾತನ್ನು ಮುಗಿಸಿತು.



*ಸಭಿಕರಿಂದ ಚಪ್ಪಾಳೆ. ಅನಂತರ ಕೈಮುಗಿಯುತ್ತ ವೇದಿಕೆ ಏರುತ್ತಲೇ,*

ಎಲ್ಲರಿಗೂ ನಮಸ್ಕಾರ, ಏಕೆ! ನನ್ನನ್ನು ನೋಡುತ್ತಿದ್ದಂತೆ ಕಣ್ಣು ಮುಚ್ಚಿದಿರಿ? ಕೊಯ್ದಾಗ ಮಾತ್ರ ಕಣ್ಣಿನಲ್ಲಿ ನೀರು ಬರುತ್ತದೆ ಎಂಬುದನ್ನು ಮರೆತಿರಾ? ನನ್ನ ತವರು ನೆರೆಯ ಚೀನಾ ದೇಶ. ಆದರೂ ಭಾರತದಲ್ಲಿ ವಾಣಿಜ್ಯ ಬೆಳೆಯಾಗಿ ಸ್ಥಾನ ಪಡೆದಿದ್ದೇನೆ. ನನ್ನನ್ನು ಇಂಗ್ಲಿಷ್‌ನಲ್ಲಿ ಆನಿಯನ್, ತೆಲುಗಿನಲ್ಲಿ ಎರ್ರಗಡ್ಡ, ತಮಿಳಿನಲ್ಲಿ ವೆಂಗಾಯಂ ಮತ್ತು ಕನ್ನಡದಲ್ಲಿ ಉಳ್ಳಾಗಡ್ಡಿ, ಈರುಳ್ಳಿ ಎಂದು ಕರೆಯುತ್ತಾರೆ. ನನ್ನಲ್ಲಿ ಆರೋಗ್ಯಕ್ಕೆ ಅಗತ್ಯವಾದ 'ಸಿ' ಜೀವಸತ್ವವಿದೆ. ಪಲ್ಯ, ಸಾಂಬಾರು, ಉಪ್ಪಿಟ್ಟು, ಕೋಸಂಬರಿ ಮುಂತಾದ ಅಡುಗೆಗಳಲ್ಲಿ ರುಚಿಗಾಗಿ ಬಳಸುತ್ತಾರೆ. ಎಂದು ಹೇಳಿ ನಿರ್ಗಮಿಸಿತು.

*ಸಭಿಕರಿಂದ ಶಿಳ್ಳೆ, ಚಪ್ಪಾಳೆ. ನಂತರ ಬಳುಕುತ್ತ ವೇದಿಕೆ ಏರುತ್ತಲೇ,*

ಹಿರಿಯರೇ, ವೈದ್ಯರು ತರಕಾರಿಯ ಜೊತೆಗೆ ಸೊಪ್ಪನ್ನು ಬಳಸಲು ಹೇಳುವುದನ್ನು ಕೇಳಿರಬಹುದಲ್ಲವೇ? ನುಗ್ಗೆ ಗಿಡದ ಎಲೆ, ಕಾಯಿಯನ್ನು ಆಹಾರದಲ್ಲಿ ಬಳಸುತ್ತಾರೆ. ನುಗ್ಗೆ ಮರದ ಎಲೆಗಳಾದ ನಮ್ಮನ್ನು ನುಗ್ಗೆ ಸೊಪ್ಪು ಎಂದು ಕರೆಯುತ್ತಾರೆ. ನಮ್ಮನ್ನು ಪಲ್ಯ, ಸಾಂಬಾರು ಮುಂತಾದ ಅಡುಗೆಗಳಲ್ಲಿ ಬಳಸುತ್ತಾರೆ. ನಮ್ಮಲ್ಲಿ ಕಬ್ಬಿಣ, ಕ್ಯಾಲ್ಸಿಯಂ ಜೊತೆಗೆ 'ಎ' ಮತ್ತು 'ಸಿ' ಜೀವಸತ್ವಗಳಿವೆ. ಇದು ಮಕ್ಕಳ ಬೆಳವಣಿಗೆಗೆ ಸಹಕಾರಿಯಾಗಿದ್ದು ಇರುಳುಗಣ್ಣಿನ ತೊಂದರೆಯನ್ನು ನಿವಾರಿಸುತ್ತದೆ. ನಿಮ್ಮ ಮನೆ ಮತ್ತು ಶಾಲೆಯ ಆವರಣದಲ್ಲಿ ಒಂದು ಗಿಡವನ್ನು ಬೆಳೆಸಿ. ಇದರಿಂದ ಖರ್ಚಿಲ್ಲದೆ ಸದಾಕಾಲ ನುಗ್ಗೆಸೊಪ್ಪು ಮತ್ತು ನುಗ್ಗೆಕಾಯಿ ಪಡೆಯಬಹುದು ಎಂದು ಬಿನ್ನವಿಸಿತು.

*ಸಭಿಕರು ಚಪ್ಪಾಳೆ ತಟ್ಟುತ್ತ ಹುರಿದುಂಬಿಸುತ್ತಿದ್ದರು. ಅನಂತರ ಬಂದ ಆಜಾನುಬಾಹು,*

ಮಾನ್ಯರೇ, ನಾನು ಸೋರೆಕಾಯಿ. ನನ್ನ ತವರು ಭಾರತ. ಹುಳಿ, ಕಡಬು, ಪಲ್ಯ, ಉಪ್ಪಿನಕಾಯಿ, ದೋಸೆ, ಹಲ್ವಾ ಮುಂತಾದ ಅಡುಗೆಗಳಲ್ಲಿ ಬಳಸುತ್ತಾರೆ. ನಾನು ಪೌಷ್ಟಿಕಾಂಶಗಳ ಪುಟ್ಟ ಕಣಜವೇ ಆಗಿದ್ದೇನೆ. ಚೆನ್ನಾಗಿ ಬಲಿತ ಕಾಯಿಯಿಂದ ಬೀಜವನ್ನು ಹೊರತೆಗೆದು ಅದರ ಬುರುಡೆಯಾಕಾರದ ಕವಚವನ್ನು ಸಂಗೀತ ವಾದ್ಯಗಳ ತಯಾರಿಕೆಯಲ್ಲಿ ಬಳಸುವುದೂ ಇದೆ. ಮಾನವ ನೀನೆಷ್ಟು ಬುದ್ಧಿವಂತ. ನಮ್ಮನ್ನು ಬಳಸಿ ರುಚಿಯಾದ ಅಡುಗೆ ತಯಾರಿಸುವ ಮೂಲಕ ನನ್ನ ಬೇಡಿಕೆ ಹೆಚ್ಚುವಂತೆ ಮಾಡಿರುವೆ. ಇದೋ ನಿನಗೆ ನನ್ನ ನಮನ ಎಂದು ಹೇಳಿ ವೇದಿಕೆಯಿಂದ ನಿರ್ಗಮಿಸಿತು.



ಇತರರ ಮಾತುಗಳನ್ನು ಕೇಳಿದ ಮೂಲಂಗಿಗೆ ತನ್ನ ಪರಿಚಯ ಮಾಡಿಕೊಳ್ಳುವ ಬಯಕೆ ಉಂಟಾಯಿತು. ಗೆಳೆಯರಂತೆ ತಾನೂ ವೇದಿಕೆ ಏರಿ ಮಾತು ಆರಂಭಿಸಿತು.

ನನ್ನ ಹೆಸರು ಮೂಲಂಗಿ, ಬಣ್ಣ ಬಿಳಿ. ನನ್ನ ತವರು ಯೂರೋಪ್, ಏಷ್ಯಾ. ನನ್ನಲ್ಲಿ ಎ.ಬಿ.ಸಿ. ಅನ್ನಾಂಗಗಳಿವೆ. ಪಲ್ಯ, ಸಾಂಬಾರು, ಮೊಸರು ಬಜ್ಜಿಗಳಲ್ಲಿ ಬಳಸುತ್ತಾರೆ. ಕೆಲವರು ನನ್ನ ಘಾಟುವಾಸನೆಯನ್ನು ಇಷ್ಟಪಡುವುದಿಲ್ಲ. ಇದರಿಂದ ನನಗೂ ಸ್ವಲ್ಪ ಬೇಸರವೇ. ಎಂದು ಹೇಳಿ ಎಲ್ಲರ ಚಪ್ಪಾಳೆ ಗಿಟ್ಟಿಸಿತು. ಲಯಬದ್ಧ ಚಪ್ಪಾಳೆ. ನಂತರ ಬಂದವರು,

ಹಿರಿಯರೇ, ನನ್ನನ್ನು ಕೊತ್ತಂಬರಿಸೊಪ್ಪು ಎಂದು ಕರೆಯುತ್ತಾರೆ. ಎಳೆಯದಿದ್ದಾಗ ವಡೆ, ಉಪ್ಪಿಟ್ಟು, ಅಕ್ಕಿಯಿಂದ ತಯಾರಿಸುವ ಬಾತು, ಸಾಂಬಾರು, ಪಲ್ಯ, ಇತ್ಯಾದಿ ತಿಂಡಿ–ತಿನಿಸುಗಳಲ್ಲಿ

ಬಳಸುತ್ತಾರೆ. ಕರಿಬೇವಿನಸೊಪ್ಪಿನಂತೆ ನಾನೂ ಸಹ ಪರಿಮಳದಿಂದ ಕೂಡಿದ್ದು ಅಡುಗೆಯ ರುಚಿಯನ್ನು ಹೆಚ್ಚಿಸುತ್ತೇನೆ. ನನ್ನಲ್ಲಿ ಅಧಿಕ ಪ್ರಮಾಣದ ಕಬ್ಬಿಣಾಂಶ ಇರುವುದನ್ನು ಗುರ್ತಿಸಿದ್ದಾರೆ. ಕಬ್ಬಿಣಾಂಶವು ರಕ್ತ ಹೀನತೆಯನ್ನು ತಡೆಯುತ್ತದೆ ಎಂದು ಹೇಳಿ ಸೊಪ್ಪು ತನ್ನ ಮಾತುಗಳನ್ನು ಮುಗಿಸಿತು.

*(ಈ ರೀತಿ ಸರದಿಯಂತೆ ಸೊಪ್ಪು ತರಕಾರಿಗಳು ತಮ್ಮ ಪರಿಚಯ ಮಾಡಿಕೊಂಡವು.)*

ಬಹುಮಾನ ವಿತರಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು. ಕಾರ್ಯಕ್ರಮದ ಬಗ್ಗೆ ಮೆಲಕುಹಾಕುತ್ತ ಎಲ್ಲರೂ ತಮ್ಮ ತಮ್ಮ ವಾಹನಗಳಲ್ಲಿ ಮನೆ, ಹೋಟೆಲ್ ಮತ್ತು ಮಾರುಕಟ್ಟೆಗೆ ನಡೆದರು. ಇಡೀ ಕಾರ್ಯಕ್ರಮವನ್ನು ದೂರದರ್ಶನದವರು ನೇರ ಪ್ರಸಾರ ಮಾಡಿದರು.

**ಸಾಮರ್ಥ್ಯ : ಸಹಜವಾಗಿ ಮತ್ತು ನಿರರ್ಗಳವಾಗಿ ಮಾತನಾಡುವುದು**

**ಆಶಯ :** ನಾವು ಬಳಸುವ ವಸ್ತುಗಳ ಬಗ್ಗೆ ತಿಳಿದುಕೊಳ್ಳುವ ಜೊತೆಗೆ ತಿಳಿದಿರುವ ವಿಷಯವನ್ನು ಮತ್ತೊಬ್ಬರಿಗೆ ಅರ್ಥವಾಗುವಂತೆ ವ್ಯವಸ್ಥಿತ ಕ್ರಮದಲ್ಲಿ ನಿರರ್ಗಳವಾಗಿ ಹೇಳುವುದನ್ನು ರೂಢಿಸಿಕೊಳ್ಳುವುದು ಇಲ್ಲಿನ ಆಶಯವಾಗಿರುತ್ತದೆ.



## ಓದಿ ತಿಳಿಯಿರಿ

ಪ್ರದರ್ಶನ–ನೋಡಲು ಇಟ್ಟಿರುವುದು: ಮಾದರಿ–ಹೋಲುವಂತೆ ಇರುವುದು: ಭಿತ್ತಿಪತ್ರ–ಪ್ರಚಾರಕ್ಕಾಗಿ ಗೋಡೆಗೆ ಹಾಕುವ ಪತ್ರಗಳು: ನೆರೆದ–ಸೇರಿದ: ಸಮೂಹ–ಗುಂಪು: ಆಕರ್ಷಕ–ಗಮನಸೆಳೆ: ಪ್ರತಿಭಟನೆ–ವಿರೋಧ: ಅಚ್ಚು ಮೆಚ್ಚು–ತುಂಬ ಇಷ್ಟ: ನಾಮಕರಣ–ಹೆಸರಿಡು: ಘಾಟು–ಕಟುವಾಸನೆ: ಕೊಯ್ಯಿ–ಕತ್ತರಿಸು: ತವರು–ತಾಯಿಯ ಮನೆ: ನೆರೆಯ–ಪಕ್ಕದ: ತಲೆಬರಹ–ವಿಷಯದ ಶೀರ್ಷಿಕೆ: ಮಾಧ್ಯಮ–ಪತ್ರಿಕೆ, ರೇಡಿಯೋ, ಟಿ.ವಿ ಇತ್ಯಾದಿ: ಗ್ರಾಹಕ – ಕೊಳ್ಳುವವ: ಪ್ರೇರೇಪಿಸು–ಉತ್ತೇಜಿಸು: ಸಭಿಕರು–ಸೇರಿದ್ದವರು: ಅಧಿಕ – ಹೆಚ್ಚು: ವಿತರಣೆ–ಹಂಚು:

## ಗಮನಿಸಿ ತಿಳಿಯಿರಿ

**ಸಂಬಾರ ಪದಾರ್ಥ** : ಮಸಾಲೆ ವಸ್ತು.

**ನಿರೂಪಕ** : ಕಾರ್ಯಕ್ರಮದ ಬಗ್ಗೆ ವಿವರವಾಗಿ ಹೇಳುವವ.

**ವೇದಿಕೆ** : ಕಾರ್ಯಕ್ರಮ ನಡೆಯುವ ಎತ್ತರವಾದ ಸ್ಥಳ.

**ಕರಪತ್ರ** : ಪ್ರಚಾರಕ್ಕಾಗಿ ಹಂಚುವ ಪತ್ರ.

ವೆಜಿಟಬಲ್ ಸಲಾಡ್ : ತರಕಾರಿಗಳ ಮಿಶ್ರಣ

ಸಂಯುಕ್ತ ಪತ್ರ : ಹಲವು ಎಲೆಗಳಂತೆ ಕಾಣುವ ಒಂದೇ ಎಲೆ

ಇರುಳುಗಣ್ಣು : ಕತ್ತಲಾದಂತೆ ಕಣ್ಣು ಕಾಣದಿರುವುದು

ಆಜಾನುಬಾಹು : ನೇರವಾಗಿ ನಿಂತರೆ ಮಂಡಿಯನ್ನು ಮುಟ್ಟುವಷ್ಟು ನೀಳವಾದ ತೋಳುಗಳುಳ್ಳವ.

## ಪಠ್ಯ ಆಧಾರಿತ ಅಭ್ಯಾಸ

### ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

೧. ಪ್ರತಿವರ್ಷ ವಿಶ್ವ ಆರೋಗ್ಯದಿನವನ್ನು ಯಾವಾಗ ಆಚರಿಸುತ್ತಾರೆ?

___

೨. ವೇದಿಕೆಯು ಯಾವುದರಿಂದ ಅಲಂಕೃತವಾಗಿತ್ತು?

___

೩. ತರಕಾರಿಗಳಿಗೆ ಏರ್ಪಡಿಸಿದ್ದ ಸ್ಪರ್ಧೆಯಾವುದು?

___

೪. ಹೂಕೋಸು ಏನೆಂದು ವಿನಂತಿಸಿತು?

___

### ಆ) ಎರಡು - ಮೂರು ವಾಕ್ಯಗಳಲ್ಲಿ ಉತ್ತರಿಸಿ.

೧. ತರಕಾರಿಗಳು ರೂಪಿಸಿದ್ದ ಕಾರ್ಯಕ್ರಮದಲ್ಲಿ ಯಾರು ಯಾರು ಭಾಗವಹಿಸಿದ್ದರು?

___

___

___

೨. ಪ್ರದರ್ಶನದಲ್ಲಿ ಏನೇನನ್ನು ಇಡಲಾಗಿತ್ತು?

___

___

___

೩. ನಿಮ್ಮ ಮನೆಯಲ್ಲಿ ಕೊತ್ತಂಬರಿಸೊಪ್ಪನ್ನು ಯಾವ ಅಡುಗೆಯಲ್ಲಿ ಬಳಸುತ್ತಾರೆ?

______________________________

______________________________

**ಇ) ಈ ಕೆಳಗಿನವುಗಳಿಗೆ ಕಾರಣಕೊಡಿ.**

೧. ನುಗ್ಗೆಸೊಪ್ಪನ್ನು ತಿನ್ನಬೇಕು.

______________________________

______________________________

೨. ತರಕಾರಿಗಳು ವಿಶ್ವ ಆರೋಗ್ಯ ದಿನವನ್ನು ಆಚರಿಸಿದವು.

______________________________

______________________________



**ಈ) ಕ್ರಮವಾಗಿ ಹೊಂದಿಸಿ ಬರೆಯಿರಿ.**

| | ಅ | ಆ | |
|---|---|---|---|
| ೧. | ಈರುಳ್ಳಿಯ ತವರು | ಇರುಳುಗಣ್ಣು ನಿವಾರಣೆ | ______ |
| ೨. | ಕೊತ್ತಂಬರಿ | ಏಷ್ಯಾ | ______ |
| ೩. | ಮೂಲಂಗಿ ತವರು | ಕಬ್ಬಿಣಾಂಶ | ______ |
| ೪. | ನುಗ್ಗೆ | ಸಂಗೀತವಾದ್ಯ | ______ |
| | | ಚೀನಾ | ______ |

## ಸಾಮರ್ಥ್ಯ ಆಧಾರಿತ ಅಭ್ಯಾಸ

ಅ) ಯಾವ ತರಕಾರಿಯ ಮಾತುಗಳು ನಿನಗೆ ಇಷ್ಟವಾಯಿತು? ಏಕೆ?

______________________________

______________________________

ಆ) ವಸ್ತುವಿನ ಪರಿಚಯ ಹೇಳುವಾಗ ಯಾವುದರ ನಂತರ ಯಾವುದನ್ನು ಹೇಳಬೇಕು ಎಂಬುದನ್ನು ಹೇಳಿಕೆಯ ಮುಂದೆ ಕೊಟ್ಟಿರುವ ಖಾಲಿ ಜಾಗದಲ್ಲಿ ಕ್ರಮಸಂಖ್ಯೆ ನೀಡಿ.

- ಉಪಯೋಗ ☐
- ಹೆಸರು ☐
- ಲಕ್ಷಣ ☐
- ಗುಣ ☐

ಇ) ಈ ಕ್ರಮದಲ್ಲಿ ಗೆಳೆಯನೊಂದಿಗೆ ನಿಮ್ಮ ಪರಿಚಯ ಮಾಡಿಕೊಳ್ಳಿ ಅನಂತರ ಇಲ್ಲಿ ಬರೆಯಿರಿ

| ೧ | ಹೆಸರು | |
|---|---|---|
| ೨ | ತಾಯಿಯ ಹೆಸರು | |
| ೩ | ತಂದೆಯ ಹೆಸರು | |
| ೪ | ಮನೆಯ ವಿಳಾಸ | |
| ೫ | ಓದುತ್ತಿರುವ ತರಗತಿ | |
| ೬ | ಶಾಲೆಯ ಹೆಸರು | |
| ೭ | ಇಷ್ಟವಾದ ಆಟ | |
| ೮ | ಇಷ್ಟವಾದ ತಿಂಡಿ | |
| ೯ | ಅಪ್ಪ ಅಮ್ಮ ಇಷ್ಟಪಡುವ ನನ್ನ ಗುಣ | |
| ೧೦ | ನಾನು ಮುಂದೆ ಏನಾಗಬೇಕೆಂಬ ಕನಸು | |



## ಭಾಷಾಭ್ಯಾಸ

ಏಕವಚನ ಪದಗಳಿಗೆ ಆವರಣದಲ್ಲಿ ಕೊಟ್ಟಿರುವ ಬಹುವಚನ ಪದಗಳನ್ನು ಆರಿಸಿ ಬರೆಯಿರಿ.

(ಅಣ್ಣಂದಿರು, ಮಕ್ಕಳು, ಕ್ರೀಡಾಪಟುಗಳು, ವಿದ್ಯಾರ್ಥಿನಿಯರು)

ಮಗು ________________ ಅಣ್ಣ ________________

ವಿದ್ಯಾರ್ಥಿನಿ ________________ ಕ್ರೀಡಾಪಟು ________________

## ಭಾಷಾ ಚಟುವಟಿಕೆ

**ಅ) ಮಾದರಿಯಂತೆ ಬರೆಯಿರಿ.**

**ಮಾದರಿ :** ಅವನು ಆಟ ಆಡಲಿಲ್ಲ : ಅವನು ಆಟ ಆಡಿದ.

೧. ಪಂಕಜ ರಾಗವಾಗಿ ಹಾಡಲಿಲ್ಲ : ______________________

೨. ಕಾರು ನಿಧಾನವಾಗಿ ಚಲಿಸುತ್ತಿಲ್ಲ : ______________________

**ಆ) ಈ ಕೆಳಗೆ ನೀಡಿರುವ ಪದಗಳಿಗೆ ವಿರುದ್ಧಾರ್ಥಕ ಪದ ಬರೆಯಿರಿ.**

ಶುದ್ಧ x ______________________ ಮುಕ್ತಾಯ x ______________________

ಆಗಮನ x ______________________ ಅನಾರೋಗ್ಯ x ______________________

ಏರು x ______________________ ಪರಿಚಿತ x ______________________

**ಇ) ಮಾದರಿಯಂತೆ ಹಿಂದು ಮುಂದಾಗಿ ಓದಿದರೂ ಒಂದೇ ಅರ್ಥ ಬರುವ ಪದಗಳನ್ನು ಬರೆಯಿರಿ.**

**ಮಾದರಿ :** ನಯನ

______________________ ______________________ ______________________



## ಚಟುವಟಿಕೆ

ಅ) ಸಮತೋಲನ ಆಹಾರದ ಪಟ್ಟಿ ತಯಾರಿಸಿ

ಆ) ನಿಮಗೆ ತಿಳಿದಿರುವ ತರಕಾರಿಗಳ ಬಗ್ಗೆ ಲೇಖನ ಬರೆದು ಫ್ಲಾನಲ್ ಬೋರ್ಡಿನಲ್ಲಿ ಪ್ರದರ್ಶಿಸಿ.

ಇ) ಸಾವಯವ ಕೃಷಿಯ ಬಗ್ಗೆ ಕೇಳಿ ತಿಳಿಯಿರಿ.

# ಪದ್ಯಪಾಠ – ೭

## ಸರ್ವಜ್ಞನ ವಚನಗಳು

**ಪ್ರವೇಶಕ್ಕೆ ಮುನ್ನ :** ಅಜ್ಞಾನದ ಕತ್ತಲನ್ನು ದೂರಮಾಡಿ ಸುಜ್ಞಾನದ ಬೆಳಕನ್ನು ನೀಡುವ ಗುರುಗಳ ಮಹಿಮೆಯ ಬಗ್ಗೆ ಮತ್ತು ಹಿರಿಯರನ್ನು ಗೌರವಿಸುವ ಕ್ರಮದ ಬಗ್ಗೆ ಸರ್ವಜ್ಞನ ವಚನಗಳಿಂದ ತಿಳಿಯೋಣ.

ಹರ ತನ್ನೊಳಿರ್ದು, ಗುರು ತೋರದೇ ತಿಳಿವುದೆ?<br>
ಮರದೊಳಗೆ ಅಗ್ನಿ ಇರುತಿರ್ದು। ತನ್ನ<br>
ತಾ ನರಿಯಬೇಕೆಂದ ಸರ್ವಜ್ಞ॥



ಬಂಧುಗಳು ಆದವರು ಬಂದುಂಡು ಹೋಗುವರು<br>
ಬಂಧನವ ಕಳೆಯಲರಿಯರು । ಗುರುವಿಂದ<br>
ಬಂಧುಗಳು ಉಂಟೆ ಸರ್ವಜ್ಞ ॥

ಗುರುವಿಂದ ಬಂಧುಗಳು, ಗುರುವಿಂದ ದೈವಗಳು<br>
ಗುರುವಿಂದಲಿಹುದು ಪುಣ್ಯವದು । ಜಗಕೆಲ್ಲ<br>
ಗುರುವಿಂದ ಮುಕ್ತಿ ಸರ್ವಜ್ಞ॥

ಗುರುಗಳಿಗೆ ಹಿರಿಯರಿಗೆ ಶಿರಬಾಗಿ ಎರಗಿದರೆ<br>
ನರಸುರರು ಬಂದು ಸಿರಿಸುರಿದು। ಕೈಲಾಸ<br>
ಕರತಲಾಮಲಕ ಸರ್ವಜ್ಞ ॥

– ಸರ್ವಜ್ಞ

**ಸಾಮರ್ಥ್ಯ :** ಆಲಿಸಿದ ವಿಷಯಗಳನ್ನು ಗ್ರಹಿಸಿ ಹಾಗಾದರೆ? ಹಾಗಾಗದಿದ್ದರೆ? ಎಂಬ ಪ್ರಶ್ನೆಗಳಿಗೆ ಉತ್ತರಿಸುವುದು.

**ಆಶಯ :** ಗುರುಹಿರಿಯರನ್ನು ಗೌರವಿಸಬೇಕು. ಅವರಲ್ಲಿ ಶ್ರದ್ಧಾಭಕ್ತಿಗಳನ್ನು ಇರಿಸಿಕೊಳ್ಳಬೇಕು. ಇಂತಹ ಸುಸಂಸ್ಕೃತಿಯನ್ನು ವಿದ್ಯಾರ್ಥಿಗಳು ಅಳವಡಿಸಿ ಕೊಳ್ಳಬೇಕೆಂಬುದೇ ಈ ವಚನಗಳ ಆಶಯವಾಗಿದೆ.

## ಕವಿ ಪರಿಚಯ

ಸರ್ವಜ್ಞನ ಕಾಲವನ್ನು ಅವನ ವಚನಗಳ ಆಧಾರದಿಂದ ಕ್ರಿ.ಶ. ೧೫ರಿಂದ ೧೬ನೇ ಶತಮಾನಗಳ ನಡುವಿನ ಅವಧಿ ಎಂದು ಹೇಳಬಹುದಾಗಿದೆ. ಇವನ ಹುಟ್ಟೂರು ಅಂಬಲೂರು. ಈಗಿನ ಹಾವೇರಿ ಜಿಲ್ಲೆಯ ಅಬ್ಬಲೂರು. ಈತನ ತಂದೆ ಬಸವರಸ, ತಾಯಿ ಮಾಳಿ.

ಸರ್ವಜ್ಞನ ವಚನಗಳು ನೀತಿಪ್ರದವಾಗಿವೆ. ಸಮಾಜದ ಅಂಕುಡೊಂಕುಗಳನ್ನು ತಿದ್ದುವ ಔಷಧಿಯಂತಿವೆ. ಸರ್ವಜ್ಞನು ಆಡುವ ನುಡಿಗಳಲ್ಲಿ ವಚನಗಳನ್ನು ತ್ರಿಪದಿಯಲ್ಲಿ ರಚಿಸಿದ್ದಾನೆ. ಸರ್ವಜ್ಞನ ವಚನಗಳನ್ನು ಮೊದಲಬಾರಿಗೆ ಉತ್ತಂಗಿ ಚನ್ನಪ್ಪನವರು ಸಂಗ್ರಹಿಸಿದ್ದಾರೆ.

## ಓದಿ ತಿಳಿಯಿರಿ

ಹರ–ಶಿವ, ತನ್ನೊಳಗಿರ್ದು–ತನ್ನ ಒಳಗೆ ಇರುವ, ತೋರದೆ–ಕಾಣದೆ, ಅಗ್ನಿ–ಬೆಂಕಿ, ಬಂಧುಗಳು–ನೆಂಟರು, ಬಂಧನ–ಸೆರೆ, ಅರಿಯರು–ತಿಳಿಯರು, ದೈವ–ದೇವರು, ಇಹುದು–ಇದೆ, ಜಗ–ಲೋಕ, ಪುಣ್ಯ–ಪವಿತ್ರ, ಮುಕ್ತಿ–ಬಿಡುಗಡೆ, ಮೋಕ್ಷ, ಹಿರಿಯರು–ದೊಡ್ಡವರು, ಶಿರ–ತಲೆ, ಎರಗು–ನಮಸ್ಕರಿಸು, ನರ–ಮಾನವ, ಸುರ–ದೇವತೆ, ಸಿರಿ–ಸಂಪತ್ತು, ಆಮಲಕ–ನೆಲ್ಲಿಕಾಯಿ.

## ಗಮನಿಸಿ ತಿಳಿಯಿರಿ



ಮುಕ್ತಿ – ಹುಟ್ಟು ಸಾವುಗಳ ಚಕ್ರದಿಂದ ಬಿಡುಗಡೆ.

ಕೈಲಾಸ – ಶಿವ ಪಾರ್ವತಿಯರು ನೆಲಸಿರುವರೆಂದು ನಂಬಿರುವ ಪರ್ವತ.

ಕರತಲಾಮಲಕ – ಅಂಗೈಮೇಲಿರುವ ನೆಲ್ಲಿಕಾಯಿಯಂತೆ ಸ್ಪಷ್ಟಗೋಚರ.

ಸಿರಿ – ಶ್ರೀ ಎಂಬುದು ಲಕ್ಷ್ಮಿಯ ಇನ್ನೊಂದು ಹೆಸರು

ಪುಣ್ಯ – ಒಳ್ಳೆಯ ಕೆಲಸದಿಂದ ದೊರೆಯುವ ಫಲ.

ತ್ರಿಪದಿ – ಮೂರು ಸಾಲಿನ ಪದ್ಯ

## ಪದ್ಯ ಆಧಾರಿತ ಅಭ್ಯಾಸ

**ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. ಮರದೊಳಗೆ ಏನಿರುವುದು?

________________________________________

೨. ಬಂದುಂಡು ಹೋಗುವವರು ಯಾರು?

________________________________________

೩. ಜಗಕೆ ಯಾರಿಂದ ಮುಕ್ತಿ ದೊರೆಯುವುದು?

________________________________________

೪. ಗುರು–ಹಿರಿಯರಿಗೆ ಹೇಗೆ ನಮಿಸಬೇಕು?

________________________________________

೫. ಈ ವಚನಗಳನ್ನು ಬರೆದ ಕವಿಯ ಹೆಸರೇನು?

________________________________________

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ:**

೧. ಬಂಧುಗಳಾದವರು ಏನು ಮಾಡುವರು?

________________________________________

________________________________________

________________________________________

೨. ಕೈಲಾಸ ಕರತಲಾಮಲಕ ಆಗಬೇಕಾದರೆ ಏನು ಮಾಡಬೇಕು?

________________________________________

________________________________________

________________________________________



**ಇ) ಈ ಕೆಳಗಿನ ಉತ್ತರಗಳಿಗೆ ಪ್ರಶ್ನೆಗಳನ್ನು ಬರೆಯಿರಿ:**

**ಮಾದರಿ :** ತನ್ನೊಳಗೆ ಇರುವ ಹರನನ್ನು ಗುರು ತೋರಬಲ್ಲನು.

**ಪ್ರಶ್ನೆ :** ಗುರು ಏನನ್ನು ತೋರಬಲ್ಲನು?

೧. ಮರದೊಳಗೆ ಅಗ್ನಿ ಇರುವುದು.

________________________________________

೨. ಗುರುವಿಗಿಂತ ಬೇರೆ ಬಂಧುವಿಲ್ಲ.

________________________________________

೩. ಗುರುಕೃಪೆಯಾದರೆ ಪುಣ್ಯ, ಮುಕ್ತಿ ಸಾಧ್ಯ.

_______________________________________________

೪. ಗುರು-ಹಿರಿಯರಿಗೆ ಶಿರ ಬಾಗಿ ಎರಗು.

_______________________________________________

## ಈ) ಸರಿಯಾಗಿ ಹೊಂದಿಸಿ ಬರೆಯಿರಿ.

| | ಅ | ಆ | |
|---|---|---|---|
| ೧. | ಗುರುವಿಂದ | ನೀರು ಇರುವುದು | : ________ |
| ೨. | ಬಂಧುಗಳು | ಬೆಂಕಿ ಇರುವುದು | : ________ |
| ೩. | ಹರನು | ಮುಕ್ತಿ ಜಗಕೆಲ್ಲ | : ________ |
| ೪. | ಸುರರು | ಬಂಧನವ ಕಳೆಯಲರಿಯರು | : ________ |
| ೫. | ಮರದೊಳಗೆ | ನಮ್ಮೊಳಗೇ ಇರುವವನು | : ________ |
| | | ಸಿರಿಯನ್ನು ಸುರಿಯುವವರು | : ________ |

## ಉ) ಈ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿರಿ:

೧. ಬಂಧು : _______________________________

೨. ಬಂಧನ : _______________________________

೩. ಪುಣ್ಯ : _______________________________

೪. ಮುಕ್ತಿ : _______________________________

೫. ಸಿರಿ : _______________________________



## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ. ಈ ಕೆಳಗಿನ ಸಂದರ್ಭಗಳನ್ನು ಓದಿರಿ, ಹಾಗಾದರೆ, ಹಾಗಾಗದಿದ್ದರೆ, ಎಂಬ ಪ್ರಶ್ನೆಗಳನ್ನು ಹಾಕಿ ಉತ್ತರ ಬರೆಯಿರಿ:**

ಮಾದರಿ : ಸಂದರ್ಭ: "ಶಾಲಾ ಕೈತೋಟಕ್ಕೆ ಬೇಲಿ ಹಾಕಬೇಕು"

ಪ್ರಶ್ನೆ : ಶಾಲಾ ಕೈ ತೋಟಕ್ಕೆ ಬೇಲಿ ಹಾಕಿದರೆ ಏನಾಗುತ್ತದೆ?

ಉತ್ತರ: ಶಾಲಾ ಕೈ ತೋಟಕ್ಕೆ ಬೇಲಿ ಹಾಕಿದರೆ, ಕೈ ತೋಟದಲ್ಲಿನ ಬೆಳೆಗಳ ರಕ್ಷಣೆಯಾಗುತ್ತದೆ.

ಪ್ರಶ್ನೆ : ಶಾಲಾ ಕೈತೋಟಕ್ಕೆ ಬೇಲಿ ಹಾಕದಿದ್ದರೆ ಏನಾಗುತ್ತದೆ?

ಉತ್ತರ: ಬೇಲಿ ಹಾಕದಿದ್ದರೆ, ಶಾಲಾ ಕೈತೋಟದಲ್ಲಿನ ಬೆಳೆಗಳು ನಾಶವಾಗುತ್ತವೆ.

೧. ಮನೆಯ ಮುಂದೆ ಕಸ ಇರದಂತೆ ಶುಚಿಯಾಗಿಡಬೇಕು.

______________________________

______________________________

೨. ವಿದ್ಯಾರ್ಥಿಗಳಿಗೆ ಶುದ್ಧಕುಡಿಯುವ ನೀರಿನ ವ್ಯವಸ್ಥೆ ಮಾಡಲಾಗಿದೆ.

______________________________

______________________________

## ಭಾಷಾ ಚಟುವಟಿಕೆ

**ಅ) ಈ ಪದಗಳ ಸಮಾನಾರ್ಥಕ ಪದಗಳನ್ನು ಬರೆಯಿರಿ:**

**ಮಾದರಿ :** ಅರಿ–ತಿಳಿ

ನರ : ______________ ಶಿರ : ______________

ಕರ : ______________ ಜಗ : ______________

**ಆ) ಓದಿ ತಿಳಿಯಿರಿ.**

| ವಿಭಕ್ತಿ | ಪ್ರತ್ಯಯ | ವಿಭಕ್ತಿ+ಪ್ರತ್ಯಯ–ವಿಭಕ್ತಿ ಪ್ರತ್ಯಯ ಪದಗಳು |
|---|---|---|
| ಪ್ರಥಮ | ಉ | ಹಸು+ಉ–ಹಸುವು |
| ದ್ವಿತೀಯ | ಅನ್ನು | ಹಸು+ಅನ್ನು–ಹಸುವನ್ನು |
| ತೃತೀಯಾ | ಇಂದ | ಹಸು+ಇಂದ–ಹಸುವಿನಿಂದ |
| ಚತುರ್ಥೀ | ಇಗೆ, ಗೆ, ಕ್ಕೆ | ಹಸು+ಇಗೆ–ಹಸುವಿಗೆ |
| ಪಂಚಮೀ | ದೆಸೆಯಿಂದ | ಹಸು+ದೆಸೆಯಿಂದ–ಹಸುವಿನ ದೆಸೆಯಿಂದ |
| ಷಷ್ಠಿ | ಅ | ಹಸು+ಅ–ಹಸುವ |
| ಸಪ್ತಮೀ | ಅಲ್ಲಿ | ಹಸು+ಅಲ್ಲಿ–ಹಸುವಲ್ಲಿ |
| ಸಂಬೋಧನಾ | ಎ, ಏ, ಓ... | ಹಸು+ ಏ– ಹಸುವೇ! |

**ತಿಳಿಯಿರಿ :** ನಾಮಪದ ಅಥವಾ ಸರ್ವನಾಮ ಶಬ್ದಗಳನ್ನು ಬೇರೊಂದು ಶಬ್ಧದೊಡನೆ ಜೋಡಿಸುವಾಗ ಬಳಸುವ ಪ್ರತ್ಯಯಗಳೇ ವಿಭಕ್ತಿ ಪ್ರತ್ಯಯಗಳು ಇವುಗಳಲ್ಲಿ ಮೇಲಿನಂತೆ ಎಂಟು ವಿಧಗಳಿವೆ.

ಇ) ಮಾದರಿಯಂತೆ ವಿಭಕ್ತ್ಯಾಂತ ವಿಭಕ್ತಿ ನಾಮಪದಗಳನ್ನು ಬರೆಯಿರಿ.

| ಮಾದರಿ : ರಾಧಳು | ರವಿಯು | ಮನೆಯು | ಬೆಟ್ಟಗಳು | ನದಿಯು |
|---|---|---|---|---|
| ರಾಧಳನ್ನು | | | | |
| ರಾಧಳಿಂದ | | | | |
| ರಾಧಳಿಗೆ | | | | |
| ರಾಧಳ ದೆಸೆಯಿಂದ | | | | |
| ರಾಧಳ | | | | |
| ರಾಧಳಲ್ಲಿ | | | | |
| ರಾಧಳೇ | | | | |

### ಪೂರಕ ಓದು

## ಜಿಂಕೆಗೆ ಆಶ್ರಯ



ಬೇಟೆಗಾರನೊಬ್ಬ ಬಿಲ್ಲು ಬಾಣ ಹಿಡಿದು ಜಿಂಕೆಯನ್ನು ಬೇಟೆಯಾಡಲು ಕಾಡಿಗೆ ಬಂದ. ಜಿಂಕೆ ನೀರು ಕುಡಿಯುತ್ತಿತ್ತು. ಕಾಲಿನ ಸಪ್ಪಳ ಕೇಳಿ ತಿರುಗಿ ನೋಡಿತು. ಅಪಾಯದ ಅರಿವಾಗಿ ಅದು ಓಡತೊಡಗಿತು. ಜಿಂಕೆಯನ್ನು ಬೆನ್ನಟ್ಟಿ ಬಂದ ಬೇಟೆಗಾರ ಒಂದು ಆಶ್ರಮದ ಬಳಿ ನಿಂತ. ಅಲ್ಲಿ ಋಷಿಯೊಬ್ಬ ಧ್ಯಾನ ಮಗ್ನನಾಗಿ ಕುಳಿತಿದ್ದ. ಆ ವೇಳೆಗಾಗಲೇ ಜಿಂಕೆ ಆಶ್ರಮದ ಒಳಗೆ ಹೋಗಿ ಅಡಗಿಕೊಂಡಿತ್ತು. ಬೇಟೆಗಾರ ಋಷಿಯನ್ನು ಪ್ರಶ್ನಿಸಿದ. "ಇತ್ತ ಒಂದು ಜಿಂಕೆ ಓಡಿ ಬಂದದ್ದನ್ನು ಕಂಡಿರ ?" ಎಂದ. ಋಷಿ ಹೇಳಿದ "ಕಂಡವರು ಮಾತನಾಡರು, ಮಾತನಾಡುವವರು ಕಾಣರು". ಬೇಟೆಗಾರನಿಗೆ ಋಷಿಯ ಮಾತಿನ ಅರ್ಥ ತಿಳಿಯಲಿಲ್ಲ. ಸಮಯ ವ್ಯರ್ಥ ಮಾಡಬಾರದು ಎಂದುಕೊಂಡು ಮುಂದೆ ಸಾಗಿದ.

ಋಷಿಯ ಆ ಮಾತಿನ ಅರ್ಥ ಹೀಗಿತ್ತು. "ಕಣ್ಣಿಗೆ ಬಾಯಿಲ್ಲ ಬಾಯಿಗೆ ಕಣ್ಣಿಲ್ಲ".

ಅ) ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

೧) ಋಷಿಯು ಸತ್ಯವನ್ನೇ ಹೇಳಿದ್ದರೆ ಏನಾಗುತಿತ್ತು ?

೨) ಕಂಡವರು ಮಾತನಾಡರು ಹಾಗಾದರೆ ಅವರು ಯಾರು ?

**ತಿಳಿಯಿರಿ:** ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುವುದು ಅಪರಾಧ

# ಗದ್ಯಪಾಠ – ೮

## ಬಂಡೆದ್ದ ಮುಂಡರಗಿ ಭೀಮರಾಯ

### (ಐತಿಹಾಸಿಕ ನಾಟಕ)

**ಪ್ರವೇಶಕ್ಕೆ ಮುನ್ನ:** ಈಗಿನ ಗದಗ ಜಿಲ್ಲೆಯ ಮುಂಡರಗಿಯ ಭೀಮರಾಯನು ಬ್ರಿಟಿಷರ ನೌಕರನಾಗಿದ್ದರೂ ಅವರ ವಿರುದ್ಧ ಸಿಡಿದೆದ್ದವನು. ಸುಮಾರು 20–22ನೆಯ ವಯಸ್ಸಿನಲ್ಲಿಯೇ ಬ್ರಿಟಿಷರ ದುರಾಡಳಿತವನ್ನು ಬಲ್ಲವನಾಗಿದ್ದ ಈತನಲ್ಲಿ ಸ್ವಾಭಿಮಾನ, ಜನಪರ ಒಲವು ಹುಟ್ಟುಗುಣವಾಗಿದ್ದು ಮುಂಡರಗಿ, ಕೊಪ್ಪಳ ಭಾಗಗಳಲ್ಲಿ ಜನಜಾಗೃತಿ ಮೂಡಿಸಿದ ಧೀಮಂತ ವ್ಯಕ್ತಿ. ರೈತರ ಹಿತಚಿಂತಕನಾಗಿ ಬ್ರಿಟಿಷರ ಅನ್ಯಾಯ, ಅಕ್ರಮ, ಅಮಾನವೀಯ ನಡೆ–ನುಡಿಗಳ ವಿರುದ್ಧ ಹೋರಾಟ ನಡೆಸಿ, ಅವರ ದಬ್ಬಾಳಿಕೆಯನ್ನು ಹತ್ತಿಕ್ಕಲು ಪ್ರಾಣವನ್ನು ಅರ್ಪಿಸಿದ ದೇಶಾಭಿಮಾನದ ಚಿತ್ರಣ ಈ ನಾಟಕದಲ್ಲಿ ಚಿತ್ರಿತಗೊಂಡಿದೆ.

**ದೃಶ್ಯ–೧**

*(ಬ್ರಿಟಿಷ್ ಅಧಿಕಾರಿ ಕಾರ್ಯಾಲಯ. ಪಾಶ್ಚಾತ್ಯ ಸಂಗೀತದ ಹಿನ್ನೆಲೆ)*



**ಬ್ರಿಟಿಷ್ ಅಧಿಕಾರಿ** : ಏನೀ ಅನಾಹುತ ರಾಯಚೂರ, ಧಾರವಾಡ ಕಲೆಕ್ಟರುಗಳು, ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕೊಪ್ಪಳ ಕೋಟೆ ಕಾಯುತ್ತಿದ್ದೇವೆ ಎಂದಿದ್ದರು, ಆದರೆ ಭೀಮರಾವ್–ಕೆಂಚನಗೌಡ ಬಂದಾಗ ಕಣ್ಣುಮುಚ್ಚಿ ಕುಳಿತಿದ್ದರೇನು?

**ಹ್ಯೂಜಿಸ್** : ಸರ್, ನಮ್ಮ ಸೆಕ್ಯೂರಿಟಿ ಗಾರ್ಡ್ಸ್ ನಮಗೆ ವಿಶ್ವಾಸಘಾತ ಮಾಡಿದ್ದಾರೆ. ಮಕ್ತುಂ ಸಾಬ್ ಮತ್ತು ಅವನ ಸಂಗಡಿಗರು ನಮ್ಮಲ್ಲಿ ಕೆಲಸಕ್ಕಿದ್ದು ಅವರ ಪರವಾಗಿ ಕೆಲಸಮಾಡಿದ್ದಾರೆ. ಅವರೇ ಕೋಟೆಯ ಬಾಗಿಲು ತೆರೆದಿದ್ದಾರೆ.

**ಬ್ರಿಟಿಷ್ ಅಧಿಕಾರಿ** : ಮೇಜರ್ ಹ್ಯೂಜಿಸ್ ಈಗ ಸಮಯವೆಷ್ಟು?

**ಹ್ಯೂಜಿಸ್** : Sir, it is 9.30 p.m. 30th May 1958 Sir.

**ಬ್ರಿಟಿಷ್ ಅಧಿಕಾರಿ** : ಐ.ಸೀ. ನೀವೀಗ ಇನ್ನೊಂದು ಗಂಟೆಯಲ್ಲಿ ಅಶ್ವದಳದೊಂದಿಗೆ ಇಲ್ಲಿಂದ ಹೊರಡಲು ಅನುವಾಗಿ. ನಾಳೆ ೩೧ರ ಬೆಳಿಗ್ಗೆ ಇಲ್ಲಿಂದ ೨೬ ಮೈಲಿ ದೂರವಿರುವ ಕೊಪ್ಪಳಕ್ಕೆ ಹೋಗಿ ಕೋಟೆಯನ್ನು ವಶಕ್ಕೆ ತೆಗೆದುಕೊಳ್ಳಬೇಕು.

**ಹ್ಯೂಜಿಸ್** : Yes Sir, But ನಮ್ಮ Soldiers ಕಡಿಮೆ ಇದ್ದಾರೆ. ಭೀಮರಾವ್ ಜೊತೆ ಹೇಗೆ Fight ಮಾಡುವುದು? ಅವರೊಂದಿಗೆ ಹೋರಾಡುವುದು ಸುಲಭವಲ್ಲ ಸರ್...

ಬ್ರಿಟಿಷ್ ಅಧಿಕಾರಿ : You'r Fool

ಹ್ಯೂಜಿಸ್ : No sir.... Yes Sir.

ಬ್ರಿಟಿಷ್ ಅಧಿಕಾರಿ : ನಿಮಗೆ ಅದರ ಚಿಂತೆ ಬೇಡ ಮುಂದೆ ಹೋಗಿ ಪರಿಸ್ಥಿತಿ ಪರಿಶೀಲಿಸಿ. ಅಷ್ಟರಲ್ಲಿ ಲಿಂಗಸೂರಿನಿಂದ, ಹೈದರಾಬಾದಿನಿಂದ ಡೆಪ್ಯೂಟಿ ಕಮೀಷನರ್ ಲೆಪ್ಟನಂಟ್‌ಟೇಲರ್, ಕರ್ನೂಲಿನಿಂದ ಅಶ್ವದಳದ ಬಾಬುರಾವ್ ಮತ್ತು ಕೃಷ್ಣರಾವ್ ಬರುತ್ತಾರೆ. ಕ್ಯಾಪ್ಟನ್ ರುದರ್‌ಫೋರ್ಡ್ ಲೀಡರ್‌ಶಿಪ್‌ನಲ್ಲಿ ಹಾಯ್ ಲ್ಯಾಂಡರ್ಸ್ ಸೈನಿಕ ತುಕುಡಿ ಬರುತ್ತದೆ ನೀವು ಮುಂದೆ ಹೋಗಿ..Go, Go A Head.

ಹ್ಯೂಜಿಸ್ : ರೈಟ್ ಸಾರ್, ಭೀಮರಾಯನನ್ನು ಖಂಡಿತ ಜೀವಂತ ಹಿಡಿದು ತರುತ್ತೇವೆ ಸರ್.

ಬ್ರಿಟಿಷ್ ಅಧಿಕಾರಿ : ಅವನು ಸಿಡಿಲು ಮರಿ..ಗೇರಿಲ್ಲಾಯುದ್ಧ ಪರಿಣಿತನಾದ ಅವನನ್ನು ಹಿಡಿಯಲು ಹೋದರೆ ಸಿಡಿಯುತ್ತಾನೆ, ತನ್ನವರನ್ನು ಹುರುದುಂಬಿಸಿ ಬಾಂಬುಗಳಂತೆ ಸ್ಫೋಟಿಸುತ್ತಾನೆ. ಅವನು ಗುಂಡೇಟಿನ ಗುರಿಕಾರ. Sharp Shooter. ಎಚ್ಚರದಿಂದ ಹೊಂಚುಹಾಕಿ ಹಿಡಿದುತನ್ನಿ.

ಹ್ಯೂಜಿಸ್ : Yes sir, We are going to arrest him, Yes sir.



## ದೃಶ್ಯ–೨

*(ಕೊಪ್ಪಳ ಕೋಟೆ ಒಳಗಡೆ ಸೇನಾನಿಗಳ ಸಭೆ, ಹೊರಗೆ ಕೋಟೆ ಬುರುಜಿನ ಮೇಲೆ ಶಸ್ತ್ರ ಸಜ್ಜಿತರಾಗಿ ಕೆಲವು ಸೇನಾನಿಗಳು ಕಾಯುತ್ತಿದ್ದಾರೆ)*

ಭೀಮರಾಯ : ಸೇನಾನಿಗಳೇ, ನಿಮ್ಮ ಸಾಹಸ ಮೆಚ್ಚುವಂಥದ್ದು, ಬ್ರಿಟಿಷರನ್ನು ಬಗ್ಗುಬಡಿದು ಕೊಪ್ಪಳ ಕೋಟೆ ವಶಪಡಿಸಿಕೊಂಡು ಗೆಲುವಿನ ಬಾವುಟ ಹಾರಿಸಿದ್ದೀರಿ. ಆದರೆ ಇದಿನ್ನೂ ಹೋರಾಟದ ಪ್ರಾರಂಭ. ಬ್ರಿಟಿಷರು ನಮ್ಮ ನಾಡು ಬಿಟ್ಟು ತೊಲಗುವವರೆಗೂ ಹೋರಾಡೋಣ, ಕೆಚ್ಚೆದೆಯಿಂದ ಹೋರಾಡಲು ಸಜ್ಜಾಗಿರಿ.

ಕರಿಯಪ್ಪ : ನಾಳೆದಿವ್ಸ ಮತ್ತಷ್ಟು ಸೈನ್ಯ ಬರೊ ಸಾಧ್ಯತೆಐತಿ. ಬಹಳಷ್ಟು ಮದ್ದುಗುಂಡು ಇವತ್ತs ಬಳಕಿ ಆದ್ವು. ನಾಳೆ ಹ್ಯಾಂಗ್ರಿ ಧಣಿ.

ಕೆಂಚನಗೌಡ : ನನಗೂ ಅದsಚಿಂತ್ಯಾಗೈತಿ, ಇವತ್ತ, ಬಲ್ಲಂಗ ಅವರ ಗುಂಡಿಗೆ ಪ್ರತಿಗುಂಡು ಹಾರ್ಸಿ ಬೆಚ್ಚಿ ಬೀಳಿಸಿದೀವಿ.

**ಭೀಮರಾಯ** : ಚಿಂತೀ ಮಾಡಿ ಪ್ರಯೋಜನಾ ಇಲ್ಲ. ನಾವು ಏಳು ಸುತ್ತಿನಕ್ವಾಟಿ ಒಳಗ ಅದೀವಿ. ಏನಾದ್ರೂ ತಂತ್ರ ಬಳಸಿ ಅವರ್ನ ಒಳಗ ಬರದಂಗ ನೋಡಕೋಬೇಕು. ಗುರಿ ಇಟ್ಟು ಬ್ರಿಟಿಷ್ ಅಧಿಕಾರಿಗಳ ಎದೀ ಸೀಳಬೇಕು. ಸ್ವಾತಂತ್ರ್ಯ ಅನ್ನೋದು ದೇಹಿ ಅಂತ ಬೇಡಿದರ ಸಿಗುವ ವಸ್ತು ಅಲ್ಲs ಹೋರಾಟಕ್ಕ ಇಳಿದೀವಿ. ಬ್ರಿಟಿಷರ ಗುಂಡಿಗೆ ಬಲಿ ಆದ್ರೂ ಸರಿ, ಛಲ ಬಿಡೋದು ಬ್ಯಾಡ, ಸ್ವಾತಂತ್ರ್ಯ ತಗೊಂಡೇ ತೀರೋಣ.



**ಕೆಂಚನಗೌಡ** : ಆಯ್ತುರಾಯರೆ... ಇಟ್ಟ ಹೆಜ್ಜೆ ತೆಗೆಯದಿರೋಣ ಹಿಂದಕ್ಕೆ.

*(ತೆರೆ ಬೀಳುವುದು)*

**ದೃಶ್ಯ–೩**

*(ಕೋಟೆಯ ಹೊರಭಾಗ. ಗಲಿಬಿಲಿ ಗದ್ದಲ . . . ಗುಂಡು ಸಿಡಿಸಿದ ಸದ್ದು)*

**ಬ್ರಿಟಿಷ್ ಅಧಿಕಾರಿ** : (ಪ್ರತಿಧ್ವನಿಸುವಂತೆ ವಿಶೇಷ ಧ್ವನಿಯಲ್ಲಿ) ಭೀಮರಾವ್ ಕೇಳು ಇನ್ನು ಮೂರು ಗಂಟೆಗಳಲ್ಲಿ ಕೋಟೆಯ ಒಳಗೆ ಇದ್ದವರೆಲ್ಲ ಹೊರಗೆ ಬಂದು. ಕೋಟೆಯನ್ನು Vacate ಮಾಡಿ surrender ಆಗದಿದ್ದರೆ ಗಂಭೀರ ಪರಿಣಾಮ ಎದುರಿಸಬೇಕಾದೀತು ಎಚ್ಚರ!

**ಭೀಮರಾಯ** : ಹೆ ಹ್ಹೆ..ನಿಮ್ಮ ಗೊಡ್ಡಬೆದರಿಕೀಗೆಲ್ಲ ಬೆದರಿಗೊತ್ತಿಲ್ಲ ಈ ಭೀಮರಾವ್‌ಗ. ನಮ್ಮ ಗುರಿ ಏನಿದ್ರೂ ಈ ನೆಲದಿಂದ ಅಟ್ಟೋದೊಂದೇ. ಗೆದ್ರೆ ಸ್ವಾತಂತ್ರ್ಯ, ಸತ್ತರ ವೀರಸ್ವರ್ಗ.

**ಬ್ರಿಟಿಷ್ ಅಧಿಕಾರಿ** : ಭೀಮರಾವ್.. ನೀನು ಸಾಗರಕ್ಕೆ ಸೇತುವೆ ಕಟ್ಟುವ ಸಾಹಸಕ್ಕೆ ಕೈ ಹಾಕಿದ್ದೀಯಾ. ನಿನ್ನ ಬಂಡಾಯದಿಂದ ಏನೂ ಪ್ರಯೋಜನವಿಲ್ಲ. ಬಾ ಹೊರಗೆ ಕೋಟೆ ಬಿಟ್ಟುಕೊಟ್ಟು ಶರಣಾದ್ರೆ ನಿನಗೆ ಕಂಪನಿ ಸರಕಾರ ಉತ್ತಮ ಸ್ಥಾನ ನೀಡಿ ಚೆನ್ನಾಗಿ Treat ಮಾಡುತ್ತದೆ.

**ಭೀಮರಾಯ** : ಏಯ್ ಪರಂಗಿ..ದೀಪ ಬೆಳಗೋದು ತನಗಾಗಿ ಅಲ್ಲ. ಇತರರಿಗೆ ಬೆಳಕಾಗಲಿ ಅಂತ. ನಮ್ಮ ಹೋರಾಟ ನಮ್ಮ ಜೀವಕ್ಕಲ್ಲ. ನಿಮ್ಮ ದಾಸ್ಯದಿಂದ ಈ ನಾಡಿನ ಬಿಡುಗಡೆಗೆ ನಾವು ಇಟ್ಟ ಹೆಜ್ಜೆ ಹಿಂದಕ್ಕೆ ತೆಗೆಯೂದಿಲ್ಲ. ದಾಸ್ಯದ ಅರಮನೆಗಿಂತ ಸ್ವಾತಂತ್ರ್ಯದ ಸೆರೆಮನೆಯೇ ಲೇಸು. ಕ್ರಾಂತಿ ಎಂದೂ ಹಿಮ್ಮುಖವಾಗಿ ನಡೆಯೋದಿಲ್ಲ. ಜೈಕನಕರಾಯ... ಜೈಮೃಡಗಿರೀಶ.....

**ಕೆಂಚನಗೌಡ** : ಜೈವೀರಭದ್ರ... ಜೈಮೃಡಗಿರೀಶ.... *(ಗುಂಡಿನ ಕಾಳಗ, ಸೈನಿಕರು ಉರುಳಿ ಬೀಳುವರು, ಕೆಂಚನಗೌಡನಿಗೆ ಗುಂಡೇಟು ಬೀಳುವುದು)*

**ಕೆಂಚನಗೌಡ** : ಹ... ಹ್ಹ... ಹ್ಹಾ....ss

**ಭೀಮರಾಯ** : ಕೆಂಚನಗೌಡ!!...

**ಕೆಂಚನಗೌಡ** : ಭೀಮರಾಯರ... ಈ ಪರಂಗಿ ಗುಂಡು ನನ್ನ ಎದಿಯಾಗ ಹೊಕ್ತ್ರ, ಎದಿಯಾಗ ಹೊಕ್ತು, ಲೇ.. ಪರಂಗಿ ಪಾಪಿಗಳೆ, ನಿಮ್.. ನಿಮ್ಮ ಎದೀ ಸೀಳದೇ ಬಿಡೂದಿಲ್ಲ ನಮ್ಮ ಭೀಮರಾಯ.. ನಿಮ್ಮನ್ನs ಹ್ಹಾ ಹ್ಹಾ ಹ್ಹಾ..

**ಭೀಮರಾಯ** : ಕೆಂಚನಗೌಡ್ರs... *(ದುಃಖ)*

**ಬ್ರಿಟಿಷ್ ಅಧಿಕಾರಿ** : ಭೀಮರಾವ್ ..ಈಗಲಾದರು ಶರಣಾಗು ನಿನಗೆ ಜೀವದಾನ ಮಾಡುತ್ತೇವೆ.

**ಭೀಮರಾಯ** : ಏನು! ..ನನಗ ಜೀವದಾನ ಮಾಡ್ತೀಯಾ? ಜೀವದಾನ.. ನನ್ನ ಸಂಗಾತಿಗಳ್ನ ಕೊಂದ ನಿಮ್ಮನ್ನ ಸುಮ್ನಬಿಡೂದಿಲ್ಲ. *(ಗುಂಡು ಹಾರಿಸುವನು)*

**ಬ್ರಿಟಿಷ್ ಅಧಿಕಾರಿ** : Fire… Fire… *(ಗುಂಡುಗಳ ಸುರಿಮಳೆ)*

**ಭೀಮರಾಯ** : ಹ್ಹಾ... ಪರಂಗಿ

**ಬ್ರಿಟಿಷ್ ಅಧಿಕಾರಿ** : ಹಹ್ಹ... ಹಹ್ಹ... ಮುಂಡರಗಿ ಭೀಮರಾಯಗೆ ಗುಂಡು ಬಿತ್ತು. ಗೆಲವು ನಮ್ಮದೇ..

**ಭೀಮರಾಯ** : ಏ ... ಫರಂಗೀ ....ನಾನು ಸತ್ತರೂ ಈ ನೆಲದಾಗ ನಾವು ಹುಟ್ಟು ಹಾಕಿದ ಬಂಡಾಯಕ್ಕೆ ಸಾವಿಲ್ಲ. ಈ ನಾಡಿನ್ಯಾಗ ಈ ಬಂಡಾಯದ ಕಹಳೆ ಮೊಳಗತಾನೇ ಇರುತ್ತೆ, ಈ ಜನ ನಿಮ್ಮ ದಾಸ್ಯದಿಂದ ಮುಕ್ತರಾಗೋ ... ತನಕ ಹೋರಾಟ ನಡೀಸೇತೀರ್ತಾರ. ನಿಮ್ಮನ್ನ ಈ ನೆಲದಿಂದ ಓಡ್ಸಿ ಸ್ವಾತಂತ್ರ್ಯ ಪಡೆದೇ ತೀರ್ತಾರಾ.. ಹ್ಹಾ..ಭಾರತಮಾತೇನ ಸ್ವಾತಂತ್ರ ಮಾಡೇ ಮಾಡ್ತಾರಾ, ಹ್ಹಾ, ಹ್ಹಾ, ಹ್ಹಾ, ಜೈ ಮೃಡಗಿರೀಶ, ಜೈ ಕನಕರಾಯ, ಜೈ ಕನ್ನಡಾಂಬೆ, ಜೈ ಭಾರತಾಂಬೆ.

**ಸಾಮರ್ಥ್ಯ:** ನಾಟಕ ಮತ್ತು ಚರ್ಚೆಗಳಲ್ಲಿ ಭಾಗವಹಿಸುವುದು.

**ಆಶಯ:** ಇತಿಹಾಸಕಂಡ ವರ್ಣರಂಜಿತ ದೇಶಪ್ರೇಮಿಗಳ ತ್ಯಾಗ-ಬಲಿದಾನ, ಸ್ವಾಭಿಮಾನ, ಜನಪರ ಒಲವು, ರೈತರ ಹಿತಚಿಂತನೆ ಇವಲ್ಲದೆ ಅನ್ಯಾಯ, ಅಕ್ರಮ, ಅಮಾನವೀಯ ನಡೆನುಡಿಗಳನ್ನು ಖಂಡಿಸಿ ಅನ್ಯಾಯದ ವಿರುದ್ಧ ಸಂಘಟನೆಯೊಂದಿಗೆ ಕ್ರಾಂತಿಗೆ ತೊಡಗಿಸುವ ನಾಯಕತ್ವಗುಣಗಳು ಸಾರ್ವಕಾಲಿಕ ಅಗತ್ಯವಾಗಿರುತ್ತವೆ. ಆ ಎಲ್ಲ ಮೌಲ್ಯಗಳನ್ನು ಅಳವಡಿಸಿಕೊಳ್ಳುವ ತುರ್ತನ್ನು ಮನವರಿಕೆ ಮಾಡುವುದೇ ಈ ಪಠ್ಯದ ಆಶಯವಾಗಿರುತ್ತದೆ.

## ಲೇಖಕರ ಪರಿಚಯ



ಡಾ. ನಿಂಗು ಸೊಲಗಿಯವರ ಪೂರ್ಣ ಹೆಸರು ನಿಂಬಪ್ಪ ಗುರುಲಿಂಗಪ್ಪ ಸೊಲಗಿ. ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಕೌಜಗೇರಿಯವರಾದ ಇವರು **ನಿಂಗುಸೊಲಗಿ** ಎಂಬ ಕಾವ್ಯನಾಮದಿಂದ ಸಾಹಿತ್ಯ ಲೋಕದಲ್ಲಿ ಪರಿಚಿತರು. ಎಂ.ಎ. ಪದವೀಧರರಾದ ಇವರು ಮಕ್ಕಳ ರಂಗಭೂಮಿ ವಿಷಯಕ್ಕೆ ಸಂಬಂಧಿಸಿದಂತೆ ಪಿ.ಹೆಚ್.ಡಿ. ಪದವಿ ಪಡೆದಿದ್ದಾರೆ. ಇವರು ಕನಸಿನ ಬಾಲೆ, ಬಾಳಜ್ಯೋತಿ, ಕರುಳಿನ ಗೆಳೆಯ ಮೊದಲಾದ ನಾಟಕಗಳನ್ನು ನಲಿಯುವ ಚಿಣ್ಣರು ನಾವು, ಮೂಡಣದ ಹಾಡುಗಳು ಮುಂತಾದ ಕವನ ಸಂಕಲನಗಳನ್ನು ಹೊರ ತಂದಿದ್ದಾರೆ. ಮುಂಡರಗಿಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಇವರು ಕರ್ನಾಟಕ ಸರ್ಕಾರದ ಬಾಲವಿಕಾಸ ಅಕಾಡಮಿಯ ರಾಜ್ಯ ಸಮಿತಿ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ವಿಶೇಷ ಶಿಕ್ಷಕ ರಾಜ್ಯ ಪ್ರಶಸ್ತಿ, ಧಾರವಾಡದ ಡೆಪ್ಯುಟಿ ಚನ್ನಬಸಪ್ಪ, ಪ್ರಾಥಮಿಕ ಶಿಕ್ಷಣ ಪ್ರತಿಷ್ಠಾನದ 'ಉತ್ತಮ ಸಾಹಿತಿ' ಪ್ರಶಸ್ತಿಗೆ ಭಾಜನರಾಗಿದ್ದಾರೆ.



ಬಾನುಲಿಯಲ್ಲಿ ಪ್ರಸಾರಗೊಂಡ ಇವರ ಐತಿಹಾಸಿಕ ನಾಟಕ 'ಬಂಡೆದ್ದ ಮುಂಡರಗಿ ಭೀಮರಾಯ' ಕೃತಿಯ ಭಾಗದ ಸಂಕ್ಷಿಪ್ತ ರೂಪವನ್ನು ಇಲ್ಲಿ ನೀಡಲಾಗಿದೆ.

## ಓದಿ ತಿಳಿಯಿರಿ

ಅನಾಹುತ – ಆಕಸ್ಮಿಕ ಕೇಡು; ವಿಶ್ವಾಸಘಾತ – ನಂಬಿಕೆ ದ್ರೋಹ; ಅಶ್ವದಳ – ಕುದುರೆ ಸೇನೆ; ಪರಿಣತ – ನುರಿತ, ತಿಳಿದವ, ಪಂಡಿತ; ಹೊಂಚುಹಾಕು – ಸಂಚುಹೂಡು; ಬಗ್ಗು ಬಡಿ– ಹತ್ತಿಕ್ಕು, ದಮನಮಾಡು; ಕೆಚ್ಚೆದೆ – ಧೈರ್ಯಶಾಲಿ, ಸಾಹಸಿ; ಸಜ್ಜಾಗು – ಸಿದ್ಧನಾಗು; ತಂತ್ರ – ಉಪಾಯ; ಛಲ – ಹಟ ; ಬಂಡಾಯ – ದಂಗೆ, ಕ್ರಾಂತಿ; ಶರಣಾಗು – ಮೊರೆಹೋಗು, ರಕ್ಷಣೆ; ದಾಸ್ಯ – ಗುಲಾಮಗಿರಿ, ಚಾಕರಿ; ಪರಂಗಿ – ವಿದೇಶಿ, ಪಾಶ್ಚಾತ್ಯದೇಶದವನು.

## ಗಮನಿಸಿ ತಿಳಿಯಿರಿ

**ಗುರಿಕಾರ** : ದೃಷ್ಟಿಯಿಟ್ಟು ಹೊಡೆಯುವುದರಲ್ಲಿ ಪರಿಣಿತನಾದವ, ಯಜಮಾನ, ಒಡೆಯ.

**ಗೊಡ್ಡು ಬೆದರಿಕೆ** : ವ್ಯರ್ಥಗದರಿಕೆ (ಗೊಡ್ಡು= ಫಲವಿಲ್ಲದ)

**ಹಿಮ್ಮುಖ** : ಹಿಂದಕ್ಕೆ ಮುಖ, ಹಿಂದೆ ಸರಿಯುವುದು. (ಬೆನ್ನುತೋರುವುದು)

## ಪಠ್ಯ ಆಧಾರಿತ ಅಭ್ಯಾಸ

### ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಯಾವ ಕೋಟೆಯನ್ನು ವಶಪಡಿಸಿಕೊಳ್ಳುವುದು ಬ್ರಿಟಿಷ್ ಅಧಿಕಾರಿಯ ಉದ್ದೇಶವಾಗಿತ್ತು?

______________________________

೨. ಸಿಡಿಲುಮರಿ ಎಂದು ಯಾರನ್ನು ಕರೆಯಲಾಗಿದೆ?

______________________________

೩. ಕನ್ನಡದ ವೀರರು ಗೆಲುವಿನ ಬಾವುಟ ಹಾರಿಸಿದ್ದು ಎಲ್ಲಿ?

______________________________

೪. ಭೀಮರಾಯನ ಹೋರಾಟದ ಗುರಿ ಯಾವುದಾಗಿತ್ತು?

______________________________



### ಆ) ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಬ್ರಿಟಿಷ್ ಅಧಿಕಾರಿ ಭೀಮರಾಯ ಹಾಗೂ ಸೈನಿಕರಿಗೆ ಏನೆಂದು ಎಚ್ಚರಿಕೆ ಕೊಟ್ಟನು?

______________________________

______________________________

______________________________

೨. ಗುಂಡು ತಾಗಿಸಿಕೊಂಡ ಭೀಮರಾಯನು ಬ್ರಿಟಿಷ್‌ರ ವಿರುದ್ಧ ನುಡಿದ ಬಂಡಾಯದ ಮಾತುಗಳೇನು?

______________________________

______________________________

______________________________

೩. ಭೀಮರಾಯನು ಸೇನಾನಿಗಳಿಗೆ ಹುರಿದುಂಬಿಸಿ ಹೇಳಿದ ಮಾತುಗಳಾವುವು?

________________________________________

________________________________________

________________________________________

## ಇ) ಕೆಳಗಿನ ಹೇಳಿಕೆಗಳನ್ನು ಯಾರು ಯಾರಿಗೆ ಹೇಳಿದ್ದಾರೆ ಎಂಬುದನ್ನು ಬರೆಯಿರಿ.

೧. "ಅವನು ಗುಂಡೇಟಿನ ಗುರಿಕಾರ".

________________________________________

________________________________________

೨. "ದಾಸ್ಯದ ಅರಮನೆಗಿಂತ ಸ್ವಾತಂತ್ರ್ಯದ ಸೆರೆಮನೆಯೇ ಲೇಸು."

________________________________________

________________________________________

೩. "ಬ್ರಿಟಿಷರು ನಮ್ಮ ನಾಡ ಬಿಟ್ಟು ತೊಲಗುವವರೆಗೂ ಹೋರಾಡೋಣ"

________________________________________

________________________________________

೪. "ನಮ್ಮ ಸಂಗಾತಿಗಳನ್ನು ಕೊಂದ ನಿಮ್ಮನ್ನ ಸುಮ್ನೆ ಬಿಡೋದಿಲ್ಲ!"

________________________________________

________________________________________

## ಈ) ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.

೧. ಸ್ವಾತಂತ್ರ್ಯ ಅನ್ನೋದು ____________ ಅಂತ ಬೇಡಿದರೆ ಸಿಗುವ ವಸ್ತು ಅಲ್ಲ.

೨. ನಿಮ್ಮ ____________ ಬೆದರಿಕೆಗೆಲ್ಲಾ ಬೆದರಿಗೊತ್ತಿಲ್ಲ.

೩. ದೀಪ ಬೆಳಗೋದು ____________ ಅಲ್ಲ.

ಉ) ಕ್ರಮವಾಗಿ ಹೊಂದಿಸಿ ಬರೆಯಿರಿ.

| | ಅ | | ಬ | |
|---|---|---|---|---|
| ೧. | ಅನಾಹುತ | – | ಅ) ಕೋಟೆ | ________ |
| ೨. | ಕೊಪ್ಪಳದ | – | ಆ) ವೀರಸ್ವರ್ಗ | ________ |
| ೩. | ಗೆದ್ರೆ | – | ಇ) ಅರಮನೆ | ________ |
| ೪. | ಸತ್ತರೆ | – | ಈ) ಸ್ವಾತಂತ್ರ್ಯ | ________ |
| | | | ಉ) ಕೇಡು | ________ |

ಊ) ಕೆಳಗಿನವುಗಳಿಗೆ ವಿರುದ್ಧ ಪದಗಳನ್ನು ಬರೆಯಿರಿ.

ಉದಾಹರಣೆ: ತೆರೆ x ಮುಚ್ಚು

೧. ಸುಲಭ x ________ ೨. ಗೆಲ್ಲು x ________

೩. ಪ್ರಾರಂಭ x ________ ೪. ಸ್ವಾತಂತ್ರ್ಯ x ________

೫. ಪರ x ________ ೬. ಹಿಂದಕ್ಕೆ x ________



ಋ) ಇವುಗಳನ್ನು ಗ್ರಾಂಥಿಕ ರೂಪದಲ್ಲಿ ಬರೆಯಿರಿ.

ಉದಾಹರಣೆ : **ಕ್ವಾಟೆ – ಕೋಟೆ**

೧. ಐತಿ – ೨. ಆದ್ವು –

೩. ಆಗ್ಯೈತಿ – ೪. ಬರದಂಗ –

೫. ಬ್ಯಾಡ – ೬. ತಗೊಂಡೇ –

## ಸಾಮರ್ಥ್ಯ ಆಧಾರಿತ ಅಭ್ಯಾಸ

ಜಾಹಿರಾತುಗಳಿಂದ ಆಗುವ ಅನುಕೂಲ/ಅನಾನುಕೂಲ ಕುರಿತು ತರಗತಿಯಲ್ಲಿ ಚರ್ಚಿಸಿ ಚರ್ಚೆಯಲ್ಲಿ ಬರುವ ಉತ್ತಮ ಅಂಶಗಳನ್ನು ಪಟ್ಟಿ ಮಾಡಿ.

________________________________________

________________________________________

---

---

## ಚಟುವಟಿಕೆ

೧. ಐತಿಹಾಸಿಕ ನಾಟಕಗಳನ್ನು ಸಂಗ್ರಹಿಸಿ ಓದಿ.

೨. ಯಾವುದಾದರೊಂದು ಪ್ರಸಿದ್ಧ ನಾಟಕವನ್ನು ಸಂಗ್ರಹಿಸಿ, ಶಿಕ್ಷಕರ ಮಾರ್ಗದರ್ಶನದಲ್ಲಿ ಪಾತ್ರಗಳನ್ನು ಹಂಚಿಕೊಂಡು ಅಭಿನಯಿಸಿರಿ.

## ಭಾಷಾಭ್ಯಾಸ

**ಅ) ಗೆರೆ ಎಳೆದಿರುವ ಪದಗಳನ್ನು ಗಮನಿಸಿ.**

೧. ವೈಭವಿಯು ಮಧುರವಾಗಿ ಹಾಡುತ್ತಾಳೆ.

೨. ರಾಹುಲ್ ಶುದ್ಧವಾಗಿ ಬರೆಯುತ್ತಾನೆ

೩. ಹಸು ಹಾಲು ಕೊಡುತ್ತದೆ.

**ಗಮನಿಸಿ** : ಹಾಡುತ್ತಾಳೆ, 'ಕ್ರಿಯಾಪದ'.
ಹಾಡು, 'ಧಾತು' ಪದ

**"ಕ್ರಿಯೆಯನ್ನು ಸೂಚಿಸುವ ಪದವೇ "ಕ್ರಿಯಾಪದ". ಕ್ರಿಯಾಪದದ ಮೂಲ ರೂಪವೇ 'ಧಾತು'**



**ಆ) ಕೆಳಗಿನ ಕ್ರಿಯಾಪದಗಳಿಗೆ ಧಾತು ಪದ ಬರೆಯಿರಿ.**

೧. ಮಾಡುತ್ತಾನೆ ________ ೨. ಓಡುತ್ತದೆ ______ ೩. ಹೋದಳು ________

## ಭಾಷಾ ಚಟುವಟಿಕೆ

**ಅ) ಮಾದರಿಯಂತೆ ಬರೆಯಿರಿ.**

ಮಾದರಿ : ಕುಶಲ – ಕೌಶಲ

೧. ಪುರುಷ – ____________ ೨. ಲೋಕ – ____________

೩. ಉಪಚಾರ – ____________ ೪. ಸುಂದರ – ____________

## ಪೂರಕ ಓದು

# ಶ್ರಮದಾನ

*ಕೆರೆಯ ಹೂಳೆತ್ತುವ ಬಗ್ಗೆ ಚರ್ಚಿಸುವ ಸಲುವಾಗಿ ಅರಳಿಕಟ್ಟೆಯ ಬಳಿ ಗ್ರಾಮದ ಹಿರಿಯರು ಸೇರಿದ್ದಾರೆ*

**ಸೋಮಣ್ಣ** : ಈ ದಿನಗಳಲ್ಲಿ ವ್ಯವಸಾಯಕ್ಕೆ ನೀರಿಲ್ಲದೆ ತೊಂದರೆಯಾಗಿರುವ ವಿಷಯ ನಿಮಗೆಲ್ಲಾ ತಿಳಿದೇ ಇದೆ.

**ಷರೀಫ್** : ಹೌದು! ಹೌದು! ಅದಕ್ಕೇ ಅಲ್ಲವೇ ನಾವು ಇಲ್ಲಿ ಸೇರಿರುವುದು. ಊರ ಕೆರೆಯಲ್ಲಿ ಹೂಳು ತುಂಬಿದೆ, ನೀರು ಇಲ್ಲವಾಗಿದೆ.

**ಸೀತಮ್ಮ** : ಷರೀಫ್ ಸಾಹೇಬರೇ, ಹೂಳು ತುಂಬಿದೆ ಎಂದು ಕೈಕಟ್ಟಿ ಕುಳಿತರೆ ಆಗದು.

**ಸೋಮಣ್ಣ** : ಹಾಗಾದರೆ ಹೂಳೆತ್ತಬೇಕು. ಹೇಗೆ? ಎಂಬ ಬಗ್ಗೆ ಎಲ್ಲರೂ ನಿಮ್ಮ ನಿಮ್ಮ ಅಭಿಪ್ರಾಯ ತಿಳಿಸಿ.

**ಜಾನ್** : ಅಧ್ಯಕ್ಷರೇ ಕೆರೆಯ ಹೂಳು ತೆಗೆಸಬೇಕು. ಈ ಕೆಲಸವನ್ನು ಸರ್ಕಾರದ ನೆರವಿನಿಂದ ಮಾಡಬಹುದಲ್ಲಾ?

**ಸೋಮಣ್ಣ** : ಆಗಬಹುದು, ಆದರೆ ಎಲ್ಲದಕ್ಕೂ ಸರ್ಕಾರದ ನೆರವನ್ನೇ ಕಾಯುವುದು ಎಷ್ಟು ಸರಿ?

**ವೆಂಕಟೇಶ** : ಹಾಗಾದರೆ ನಾವು ಏನು ಮಾಡಬಹುದು?

**ಸೋಮಣ್ಣ** : ಪ್ರತಿ ಮನೆಯಿಂದ ಒಬ್ಬೊಬ್ಬರು ಬಂದು ಶ್ರಮದಾನದ ಮೂಲಕ ಹೂಳೆತ್ತುವ ಕೆಲಸ ಮಾಡಬಹುದು. ಇದಕ್ಕೆ ನಿಮ್ಮಗಳ ಅಭಿಪ್ರಾಯವೇನು?

**ಸೀತಮ್ಮ** : ಒಳ್ಳೆಯ ಕೆಲಸಕ್ಕೆ ಯಾರೂ ಹಿಂದೆ ಬೀಳುವುದಿಲ್ಲ. ಇದು ನನ್ನ ಅಭಿಪ್ರಾಯ.

**ಎಲ್ಲರೂ** : ಹಾಗೆಯೇ ಆಗಲಿ, ನಾವೂ ಕೈಜೋಡಿಸುತ್ತೇವೆ.

(ಎಲ್ಲರ ಶ್ರಮದಾನದ ಮೂಲಕ ಕೆರೆಯಲ್ಲಿನ ಹೂಳು ತೆಗೆಯುವ ಕಾರ್ಯವು ಜರುಗಿತು)

### ಪ್ರಶ್ನೆಗಳು

೧. ಅರಳಿ ಕಟ್ಟೆಯಲ್ಲಿ ಜನರು ಯಾವ ವಿಷಯ ಚರ್ಚಿಸಲು ಸೇರಿದ್ದರು?

೨. ಕೆರೆಯ ಹೂಳೆತ್ತುವ ಕಾರ್ಯವನ್ನು ಯಾರು ಮಾಡುವುದೆಂದು ತೀರ್ಮಾನಿಸಿದರು?

# ಪದ್ಯಾಧಾರಿತ ಪದಕೋಶ

## ಅ

ಅಟ್ಟು – ಕಳಿಸು, ಅಡುಗೆಮಾಡು, ಬೆನ್ನಟ್ಟು, ಓಡಿಸು.

ಅಧಿಕ – ಹೆಚ್ಚು, ಉತ್ತಮ, ಮೇಲಾದ

ಅನನ್ಯ – ಏಕನಿಷ್ಠ, ಅದ್ವಿತೀಯ

ಅನಾಹುತ – ಆಕಸ್ಮಿಕ ಕೇಡು, ನಾಶ

ಅಭಿಪ್ರಾಯ – ಆಶಯ, ಉದ್ದೇಶ, ತಾತ್ಪರ್ಯ

ಅರಮನೆ – ರಾಜನಮನೆ

ಅರಿ – ತಿಳಿ, ಕಲಿ, ಕತ್ತರಿಸು, ವೈರಿ, ಶತ್ರು

ಅರಿವು – ತಿಳುವಳಿಕೆ, ಜ್ಞಾನ

ಅಶ್ವದಳ – ಕುದುರೆ ಸೇನೆ

## ಆ

ಆಕರ್ಷಿಸು – ತನ್ನಕಡೆ ಸೆಳೆ

ಆಶೆ – ಅಪೇಕ್ಷೆ, ಬಯಕೆ ಭರವಸೆ, ನಂಬಿಕೆ, ಆಸೆ

## ಉ

ಉಲಿ – ಧ್ವನಿ, ಕೂಗು, ಹೇಳು, ಮಾತು ಶಬ್ದ

## ಎ

ಎರಗು – ನಮಸ್ಕರಿಸು, ಬಾಗು, ಆವರಿಸು

## ಔ

ಔಷಧಿಸಸ್ಯ – ಔಷಧ ಗುಣವಿರುವ ಸಸ್ಯ

## ಕ

ಕಂಸಾಳೆ – ಕಂಚಿನ ತಾಳ

ಕಣಜ – ಧಾನ್ಯವನ್ನು ಸಂಗ್ರಹಿಸುವ ಸ್ಥಳ ಬಿದಿರಿನ ಗೂಡು

ಕಲರವ – ಹಕ್ಕಿಗಳ ಮಧುರವಾದ ಧ್ವನಿ

ಕಲಿ – ತಿಳಿದುಕೋ, ವೀರ, ಕಲಿಯುಗ, ಕಲಿ ಪುರುಷ

ಕಲಿಕೋಪಕರಣ – ಕಲಿಕೆಗೆ ಸಹಕಾರಿಯಾಗುವಂತೆ ಸಿದ್ಧ ಪಡಿಸಿರುವ ಉಪಕರಣ

ಕವಚ – ಹೊದಿಕೆ, ಉಕ್ಕಿನ ಅಂಗಿ,

ಕೊಯ್ಯಿ – ಕತ್ತರಿಸು, ಸೀಳು, ಗಿಡದಿಂದ ಹಣ್ಣು ಹೂ ಮುಂತಾದವನ್ನು ಕೀಳು

ಕೊಳೆ – ಕೊಳೆತುದು, ಹೊಲಸು

## ಗ

ಗಂಭೀರ – ಆಳವಾದ, ಗಹನ, ಗೂಢ

ಗುರಿಕಾರ – ಲಕ್ಷ್ಯವಿಟ್ಟು ಹೊಡೆಯುವವ, ಒಡೆಯ ಯಜಮಾನ

ಗೊಡ್ಡು ಬೆದರಿಕೆ – ವ್ಯರ್ಥಗದರಿಕೆ

## ಜ

ಜೀವಂತ – ಜೀವವಿರುವ

ಜೀವದಾನ – ಬದುಕಲು ಬಿಡುವುದು ಪ್ರಾಣದಾನ

## ತ

ತಮಟೆ – ಒಂದು ಬಗೆಯ ಚರ್ಮವಾದ್ಯ

ತಳಿರುತೋರಣ – ಅಲಂಕಾರಕ್ಕಾಗಿ ಬಾಗಿಲು ಮುಂತಾದವಕ್ಕೆ ಕಟ್ಟಿರುವ ಚಿಗುರಿನ ಮಾಲೆ

ತಿಳಿ – ಕಲಿ, ಗ್ರಹಿಸು, ಎಚ್ಚರಗೊಳ್ಳು, ಶುದ್ಧವಾಗು, ನಿರ್ಮಲವಾಗು

ತುಕಡಿ – ಸೇನೆಯ ಒಂದು ಭಾಗ, ತುಣುಕು, ತುಂಡು

ತೆಪ್ಪಗಾಗು – ಬಾಯಿ ಮುಚ್ಚು, ಮೌನಿಯಾಗು

## ದ

ದಂಡು – ಗುಂಪು, ಸೈನ್ಯ

ದಡ – ದಂಡೆ, ತಟ, ತೀರ

ದಾಸ್ಯ – ಗುಲಾಮಗಿರಿ, ಸೇವಾವೃತ್ತಿ ಅಧೀನತೆ, ಊಳಿಗ

## ನ

ನಮನ – ನಮಸ್ಕಾರ

ನರ – ಮನುಷ್ಯ, ಅರ್ಜುನ, ರಕ್ತ ಹರಿಯುವ ನಾಳ

ನಿರಂತರ – ಯಾವಾಗಲೂ, ಸದಾ

ನಿರರ್ಗಳ – ತಡೆಯಿಲ್ಲದ, ಸರಾಗವಾದ

ನಿರ್ಗಮಿಸು – ಹೋಗು, ಹೊರಡು

ನಿರ್ಮಿಸು – ಕಟ್ಟು, ರಚಿಸು, ಸಿದ್ಧಪಡಿಸು

## ಪ

ಪೀಳಿಗೆ – ಸಂತತಿ, ತಲೆಮಾರು

ಪ್ರದರ್ಶನ – ನೋಟ, ದೃಶ್ಯ

## ಬ

ಬಂಡಾಯ – ಬಂಡು, ದಂಗೆ, ಪ್ರತಿಭಟನೆ

ಬಗ್ಗುಬಡಿ – ಹತ್ತಿಕ್ಕು, ದಮನಮಾಡು

ಬಯಕೆ – ಹಂಬಲ, ಆಸೆ

ಬಯಲಾಟ – ಜನಪದ ರಂಗಭೂಮಿಯ ಕಲೆ

ಬಾನು – ಆಕಾಶ, ಗಗನ

ಬಿನ್ನವಿಸು – ಕೇಳಿಕೋ, ಮನವಿಮಾಡು, ವಿನಂತಿಸು, ವಿಜ್ಞಾಪಿಸು.

ಬೆಪ್ಪಗಾಗು – ಕಂಗೆಡು, ದಿಗ್ಭ್ರಮೆಯಾಗು

ಬೆರೆಸು – ಬೆರಕೆ ಮಾಡು, ಮಿಶ್ರಮಾಡು

## ಮ

ಮಾದರಿ – ನಮೂನೆ, ಆದರ್ಶ, ಅನುಕರಣೆಗೆ ಯೋಗ್ಯವಾದುದು, ರೀತಿ ಕ್ರಮ

ಮಾರ್ಗದರ್ಶನ – ದಾರಿ ತೋರಿಸುವುದು.

ಮುಕ್ತಿ – ಬಿಡುಗಡೆ, ವಿಮೋಚನೆ, ಮೋಕ್ಷ, ಕೈವಲ್ಯ

ಮೆಲಕುಹಾಕು – ನೆನಪಿಸಿಕೋ, ಹಿಂದಿನ ವಿಷಯಗಳನ್ನು ಮತ್ತೆ ಸ್ಮರಿಸು, ನುರಿಸು, ಜಗಿ

ಮೊಳಗು – ವಾದ್ಯಬಾರಿಸು, ಗುಡುಗು, ಧ್ವನಿ ಹೊರಡು

## ಯ

ಯಕ್ಷಗಾನ – ಕರ್ನಾಟಕದ ಕರಾವಳಿಯ ಪ್ರದರ್ಶನಾತ್ಮಕ ರಂಗಕಲೆ

## ವ

ವಾಣಿಜ್ಯಬೆಳೆ – ವ್ಯಾಪಾರಿಬೆಳೆ, ಅಧಿಕ ಹಣ ತರುವ ಬೆಳೆ

ವೇದಿಕೆ – ಕಾರ್ಯಕ್ರಮ ನಡೆಯುವ ಎತ್ತರವಾದ ಸ್ಥಳ

## ಸ

ಸನಿಹ – ಸಮೀಪ, ಹತ್ತಿರ

ಸಮವಸ್ತ್ರ – ಗೊತ್ತು ಪಡಿಸಿರುವ ಒಂದೇ ರೀತಿಯಾದ ಉಡುಪು

ಸೊಗಸು – ಅಂದವಾಗಿ ಕಾಣು, ಕಂಗೊಳಿಸು, ಸಂತೋಷಗೊಳ್ಳು

ಸ್ಮರಿಸು – ಜ್ಞಾಪಕ ಮಾಡಿಕೊಳ್ಳು, ಧ್ಯಾನಿಸು, ಚಿಂತನೆಮಾಡು

## ಹ

ಹಂಸ – ಒಂದು ಜಾತಿಯ ಪಕ್ಷಿ,

ಹರುಷ – ನಲಿವು, ಸಂತೋಷ, ಆನಂದ

ಹುಲುಸಾಗಿ – ಸಮೃದ್ಧವಾಗಿ, ಹೆಚ್ಚಾಗಿ ಅಧಿಕವಾಗಿ

ಹೊಟ್ಟೆಕಿಚ್ಚು – ಅಸೂಯೆ, ಈರ್ಷೆ, ಮತ್ಸರ